# ನಮ್ಮ ಮಾನಸ

**ಮೇ 2012**

ಸಂಪುಟ : 5 ಸಂಚಿಕೆ : 13



*Editor, Printer and Publisher*
**Rajeshwari H.S.,**
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 98804 67372 / 98869 18910*



*Printed at*
**ILA Mudrana**
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*



*ಸಂಪಾದಕ ಮಂಡಳಿ*
**ಲೇಖಾ ಅಡವಿ, ದಿಶಾ ಕೆ.ಆರ್., ಜಾನವಿ ಎ., ನಿಹಾರಿಕ ಶೆಣೈ, ಸಮುದ್ಯತಾ ಕಂಜರ್ಪಣೆ, ಶೀತಲ ಭಟ್**

*ಸಲಹೆ – ಸಹಕಾರ, ಮಾನಸ ಬಳಗ*
**ಸವಿತಾ ಎ., ಚಂಪಾವತಿ ಹೆಚ್.ಎಸ್., ನೀಲಾಂಜನ, ಗೀತಾ, ಶಾರದ ಬಿ.ಎನ್. ತಸ್ನೀಂತಾಜ್, ಸುಪ್ರಿಯ**


*ಚಂದಾ ವಿವರ*

| | |
|---|---|
| ಬಿಡಿಪ್ರತಿ | 10–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |


## ನಮ್ಮ ಮಾನಸ

114/5, 9ನೇ ತಿರುವು, 2ನೇ ಮುಖ್ಯರಸ್ತೆ, ಚಾಮರಾಜಪೇಟೆ, ಬೆಂಗಳೂರು – 560 018


*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

**ಪ್ರಾರಂಭ : 'ಮಾನವಿ' (1985ರಲ್ಲಿ), ಅನಂತರ 'ಮಾನಸ', ಈಗ 'ನಮ್ಮ ಮಾನಸ'**

## ಒಳಗಿನ ಪುಟಗಳಲ್ಲಿ....



## ಸಹೃದಯ ಓದುಗರಲ್ಲಿ...

ನೀವು ನಮ್ಮ ಚಿಂತನೆ–ಗುರಿಯನ್ನು ಬಲಪಡಿಸುವಿರೆಂದು ನಮಗೆ ನಂಬಿಕೆ ಇದೆ. ನೀವು ಓದುತ್ತಿರುವ ಮಾನಸವನ್ನು ಹೊರತರಲು ನಿಮ್ಮ ಆರ್ಥಿಕ ನೆರವು, ಪ್ರೋತ್ಸಾಹ ಮುಖ್ಯ. ಮಾನಸವನ್ನು ಮತ್ತೊಮ್ಮೆ ನಿರಂತರವಾಗಿ ಜೀವಂತವಾಗಿಡಲು ಸಹೃದಯ ಓದುಗರ ಬೆಂಬಲದ ಅಗತ್ಯವಿದೆ. ನೀವು ಯಾವುದಾದರೊಂದು ಬಗೆಯಲ್ಲಿ ನಮ್ಮೊಂದಿಗೆ ಕೈಜೋಡಿಸಬಹುದು.

- ಪ್ರತಿ ತಿಂಗಳಿಗೊಮ್ಮೆ ಲೇಖನಗಳನ್ನು ಬರೆಯಿರಿ ಇಲ್ಲವೇ ಬೇರೆಯವರಿಂದ ಬರೆಯಿಸಿ ಕಳುಹಿಸಿ.
- ವಾರ್ಷಿಕ ಚಂದಾದಾರರಾಗಿ ಮತ್ತು ಇನ್ನಷ್ಟು ಚಂದಾದಾರರನ್ನು ಪರಿಚಯಿಸಿ.
- ಮಾನಸದ ಒಂದು ತಿಂಗಳ ಮುದ್ರಣದ ಖರ್ಚು ರೂ. 7,000/- ರಲ್ಲಿ ಪೂರ್ತಿ ಇಲ್ಲವೇ ನಿಮಗೆ ಸಾಧ್ಯವಾದಷ್ಟು ಹಣವನ್ನು ಕೊಟ್ಟು ಬೆಂಬಲಿಸಿ ಕೈ ಜೋಡಿಸುವಿರೆಂಬ ಆಶಯದೊಂದಿಗೆ,

**ಹೆಚ್ಚಿನ ವಿವರಗಳಿಗೆ ಸಂಪರ್ಕಿಸಿ**


E-mail: nammamanasa@gmail.com
Contact: Disha K.R.: 9880467372, Lekha: 9686757053, Samudyatha : 97388 22836



ಸಂಪಾದಕೀಯ

# ಆಕ್ರಮಣಕ್ಕೊಳಗಾಗಿರುವ ಕಾರ್ಮಿಕರ ಹಕ್ಕುಗಳು

ಮೇ 1 ಅಥವಾ ಮೇ ದಿನ ಎಂಬುದು ಎಂಟು ಗಂಟೆಗಳ ಕಾಲದ ಕೆಲಸಕ್ಕಾಗಿ ನಡೆದ ಹೋರಾಟದ ಇತಿಹಾಸದ ಜೊತೆ ಆಳವಾಗಿ ತಳಕು ಹಾಕಿಕೊಂಡಿದೆ. ಹತ್ತೊಂಭತ್ತನೆಯ ಶತಮಾನದಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿ 14, 16, 18 ಗಂಟೆಗಳ ಕಾಲಕ್ಕೆ ದಿನದ ಕೆಲಸ ಮುಗಿಯುತ್ತಿದ್ದುದು ಸಾಮಾನ್ಯವಾದ ಸಂಗತಿಯಾಗಿತ್ತು. ಇಂತಹ ಅಮಾನವೀಯ ಕೆಲಸದ ಅವಧಿಗೆ ತಮ್ಮ ಆರೋಗ್ಯ ಹಾಗೂ ಬದುಕುಗಳ ಬೆಲೆ ತೆತ್ತು ಕೆಲಸ ಮಾಡುತ್ತಿದ್ದ ಬಡಜನರು ಕಡಿಮೆ ಅವಧಿಯ ಕೆಲಸಕ್ಕಾಗಿ ಮಾಡಿದ ಹೋರಾಟ ತತ್ ಕ್ಷಣದಲ್ಲಿ ರಾಜಕೀಯ ಮಹತ್ವ ಹೊಂದಿದ ಬೇಡಿಕೆಯಾಗಿ ಪರಿಣಮಿಸಿತ್ತು. ಮೇ ದಿನದ ಹುಟ್ಟಿನ ಇತಿಹಾಸವನ್ನು ಯು.ಎಸ್. ಹಾಗೂ ಕೆನಡಾದಲ್ಲಿನ ಕಾರ್ಮಿಕ ಸಂಘಟನೆಗಳು ಪಾಸು ಮಾಡಿದ ಠರಾವಿನಲ್ಲಿ ಗುರುತಿಸಬಹುದಾಗಿದೆ. ಈ ಠರಾವು ಮೇ 1, 1886ರಿಂದ 8 ಗಂಟೆಯ ಅವಧಿಯ ಕೆಲಸ ದಿನದ ನ್ಯಾಯಬದ್ಧ ಅವಧಿಯ ಕೆಲಸವಾಗಿರುತ್ತದೆ ಎಂದು ಘೋಷಿಸಿತು.

ಶ್ರಮವನ್ನು ನಿಯಂತ್ರಿಸುವ ಹಾಗೂ ಶ್ರಮದ ಸ್ಥಿತಿ-ಗತಿಗಳನ್ನು ರೂಪಿಸುವ ಹಂತದಲ್ಲಿ ಮೇ 1 ಐತಿಹಾಸಿಕ ತಿರುವು ನೀಡಿದ ದಿನವಾಗಿದೆ. ಈ ದಿನ ಕಾರ್ಮಿಕ ವರ್ಗದ ಸಂಘಟನೆಯ ಚಟುವಟಿಕೆ, ಶಕ್ತಿಯನ್ನು ಇಡಿಯ ಪ್ರಪಂಚದಲ್ಲಿ ಪ್ರಚುರಪಡಿಸಿದ್ದಲ್ಲದೇ ತಮ್ಮ ಕೆಲಸದ ಸ್ಥಿತಿ-ಗತಿಯನ್ನು ನಿರ್ಧರಿಸುವಲ್ಲಿ ಕಾರ್ಮಿಕರ ಮಾತಿಗೆ ಮನ್ನಣೆ ದೊರೆಯುವಂತಹ ಒಂದು ಮಹತ್ವದ ಬೆಳವಣಿಗೆಯೂ ಆಯಿತು. ಕಾರ್ಮಿಕರನ್ನು ನಿರಂಕುಶವಾಗಿ ನೇಮಿಸುವ / ಕಿತ್ತುಹಾಕುವ ವಿರುದ್ಧ ರಕ್ಷಣೆ, ಕನಿಷ್ಠ ಕೂಲಿಯ ವ್ಯಾಖ್ಯಾನ, ಕಾರ್ಮಿಕರ ಕಾನೂನಿನ ಬೆಳವಣಿಗೆ, ಸಾಮಾಜಿಕ ಭದ್ರತೆಯ ಕೆಲವು ಸವಲತ್ತುಗಳು ದಶಕಗಳ ಕಾಲ ನಡೆದ ಕಾರ್ಮಿಕರ ಅವಿರತ ಹಾಗೂ ದೃಢ ಹೋರಾಟದ ಫಲಗಳಾಗಿದ್ದವು.

ಆದರೆ ಕಳೆದ ಕೆಲವು ವರ್ಷಗಳಲ್ಲಿ, ಇನ್ನೂ ನಿರ್ದಿಷ್ಟವಾಗಿ ಎಂದರೆ, ಭಾರತದ ಆರ್ಥಿಕತೆ ಉದಾರೀಕರಣಗೊಂಡ ಕಳೆದ ಎರಡು ದಶಕಗಳಲ್ಲಿ ಭಾರತದ ಕಾರ್ಮಿಕರು ಬೆವರು ಸುರಿಸಿ ಹೋರಾಟ ನಡೆಸಿ ಪಡೆದಿದ್ದ ಹಕ್ಕುಗಳು ಇಂದು ಆಕ್ರಮಣಕ್ಕೆ ಒಳಗಾಗ ತೊಡಗಿವೆ. ಮೇ ದಿನ ಎಂಬುದು ಕಾರ್ಮಿಕರಿಗಾಗಿ ಎಂಬುದಾಗಿದ್ದರೆ, ಅನಿಯಂತ್ರಿತ ಮಟ್ಟದಲ್ಲಿ ಸಂಪತ್ತನ್ನು ಕಬಳಿಸುವ ಅವಕಾಶವನ್ನು ಒದಗಿಸುವ ಮೂಲಕ ಉದಾರೀಕರಣ ಎಂಬುದು ಭಾರತದ ಶ್ರೀಮಂತರಿಗೆ ಐತಿಹಾಸಿಕ ತಿರುವು ನೀಡಿದ ಅಂಶವಾಗಿದೆ. ಈ ಸಂಪತ್ತು ಗಾಳಿಯಿಂದ ಅಥವಾ ಆಕಾಶದಿಂದ ಉದುರಿರುವುದೇನಲ್ಲ. ಅನೇಕ ಕಾನೂನು ಬಾಹಿರ ಹಾಗೂ ಕ್ರಿಮಿನಲ್ ಮಾರ್ಗಗಳಿಂದ ಮುಖ್ಯವಾಗಿ ಬಡಜನರ ಶ್ರಮವನ್ನು ದೋಚುವ ಮೂಲಕ ಈ ಸಂಪತ್ತು ಇಂದು ರೂಪುಗೊಂಡಿದೆ. ಶ್ರೀಮಂತ ಬಂಡವಾಳಶಾಹಿಗಳ ಪರವಾಗಿ ಕಾರ್ಯನಿರ್ವಹಿಸುವ ಸರ್ಕಾರ ಕಳೆದ 20 ವರ್ಷಗಳಲ್ಲಿ ಕಾನೂನು ಹಾಗೂ ಯೋಜನೆಗಳ ಮೂಲಕ ಎಲ್ಲಾ ಉದ್ಯೋಗಗಳ ಕ್ಷೇತ್ರದಲ್ಲಿಯೂ ಅನೌಪಚಾರಿಕ ಔದ್ಯೋಗಿಕ ರಚನೆಯನ್ನು ಅಸ್ತಿತ್ವಕ್ಕೆ ತಂದಿದೆ.

ಅಸಂಘಟಿತ ಅಥವಾ ಅನೌಪಚಾರಿಕ ಉದ್ಯೋಗ ಕ್ಷೇತ್ರ ಎಂದರೆ ಸುಲಭವಾಗಿ ನೇಮಿಸುವ / ಕಿತ್ತು ಹಾಕುವ, ಸಂಘಟನೆಯ ಕೊರತೆ, ಕನಿಷ್ಠ ಕೂಲಿಯ ಕಾನೂನುಗಳನ್ನು ಮುರಿಯುವುದು, ಅಲ್ಪ ಅಥವಾ ಯಾವುದೇ ಸಾಮಾಜಿಕ ಭದ್ರತೆ ಇಲ್ಲದಿರುವುದು, ಕೆಲಸ ನೀಡುವ ಅಧಿಕಾರಿ ಅದೃಶ್ಯವಾಗಿರುವುದು ಎನ್ನುವುದಾಗಿದೆ. ಏಕೆಂದರೆ ಹೊಸ ವಿಧಾನಗಳಲ್ಲಿ ಶ್ರಮವನ್ನು ಗುತ್ತಿಗೆ ನೀಡುವ ಮೂಲಕ ನೇಮಕಾತಿ ಹಾಗೂ ರದ್ಧತಿಯ ಜವಾಬ್ದಾರಿಯನ್ನು ಮಧ್ಯವರ್ತಿ, ರೌಡಿ ಅಥವಾ ರಟ್ಟೆ ಬಲದ ಮೂಲಕ ಮಾಡಿಸಲಾಗುತ್ತದೆ. ಇಂತಹವರು ಮ್ಯಾನೇಜರ್ ಆಗಿ ನೇಮಕಗೊಂಡಿರುತ್ತಾರೆ. 1991ರಲ್ಲಿ ಉದಾರೀಕರಣ ಅಸ್ತಿತ್ವಕ್ಕೆ ಬಂದಾಗಿನಿಂದ ಅನೌಪಚಾರಿಕ ಔದ್ಯೋಗಿಕ ಕ್ಷೇತ್ರದಲ್ಲಿ ಕಾರ್ಮಿಕರನ್ನು ನೇಮಿಸಿಕೊಳ್ಳುವುದು ದುಪ್ಪಟ್ಟರಷ್ಟಾಗಿದೆ.

ಅಸಂಘಟಿತ ಕ್ಷೇತ್ರದಲ್ಲಿ ಉದ್ಯೋಗದ ಕೆಳಹಂತದಲ್ಲಿ ದುಡಿಯುವವರು ಒಟ್ಟಾಗಿ ಮಹಿಳೆಯರೇ ಆಗಿರುತ್ತಾರೆ. ಗಾರ್ಮೆಂಟ್ಸ್, ಮನೆಕೆಲಸ, ಬೀದಿ ಕಸ ಗುಡಿಸುವಂತಹ ಕ್ಷೇತ್ರಗಳಲ್ಲಿ ಶೇಕಡಾ 80% ಕಾರ್ಮಿಕರು ಮಹಿಳೆಯರೇ ಆಗಿರುತ್ತಾರೆ. ಈ ಮಹಿಳೆಯರು ಹೆಚ್ಚಾಗಿ ದಲಿತ ಹಾಗೂ ಇತರ ಸಾಮಾಜಿಕ ಹಿಂದುಳಿದ ವರ್ಗದಿಂದ ಬಂದವರಾಗಿರುತ್ತಾರೆ. ಹೆಚ್ಚು ಮಹಿಳೆಯರು ಮೊದಲ ಬಾರಿಗೆ ಔದ್ಯೋಗಿಕ ಕ್ಷೇತ್ರಕ್ಕೆ ಹೆಜ್ಜೆ ಇಟ್ಟವರಾಗಿರುತ್ತಾರೆ. ಮತ್ತಿತ್ತರರು ವಲಸಿಗರಾಗಿರುತ್ತಾರೆ. ಈ ಎಲ್ಲಾ ಗುಣಲಕ್ಷಣಗಳಿಂದಾಗಿ ಮಹಿಳಾ ಕಾರ್ಮಿಕರು ಅತ್ಯಂತ ಶೋಚನೀಯ ಸ್ಥಿತಿಯಲ್ಲಿದ್ದು ಹೆಚ್ಚು ಶೋಷಣೆಗೆ ಒಳಗಾಗುತ್ತಾರೆ. ಈ ಹಂತದಲ್ಲಿಯೇ 'ಬಡತನದ ಸ್ತ್ರೀತನ' ಎಂಬ ಒಂದು ಪರಿಕಲ್ಪನೆ ಬೆಳೆದಿದೆ.

ಪೌರ ಕಾರ್ಮಿಕರ ಔದ್ಯೋಗಿಕ ಕ್ಷೇತ್ರದಲ್ಲಿ ಕೆಲಸ ನೀಡಿದ ಅಧಿಕಾರಿ ಅದೃಶ್ಯವಾಗಿರುವಷ್ಟು ಇನ್ನೆಲ್ಲಿಯೂ ಅದೃಶ್ಯರಾಗಿಲ್ಲ. ಇಲ್ಲಿ ಅಧಿಕಾರಿ ಎಂದರೆ ಸರ್ಕಾರವೇ ಆಗಿರುತ್ತದೆ. ಕಾರ್ಮಿಕರ ಬದುಕಲ್ಲಿ ಸರ್ಕಾರ ಪೂರ್ತಿಯಾಗಿ ಕಣ್ಮರೆಯಾಗಿದೆ. ಪೌರಕಾರ್ಮಿಕರ ನೇಮಕಾತಿ ನಡೆಯುವುದು ರಾಜಕೀಯ ಪ್ರಭಾವ ಹೊಂದಿರುವ ವ್ಯಕ್ತಿಗಳಿಂದ. ಸ್ಥಳೀಯ ರೌಡಿಗಳನ್ನು ಬಳಸಿ ಕಾರ್ಮಿಕರನ್ನು ಮಣಿಸಲಾಗುತ್ತದೆ ಹಾಗೂ ಅವರ ಸಂಘಟನೆಯ ಪ್ರಯತ್ನಗಳನ್ನು ಕ್ರಿಯಾಶೀಲವಾಗಿ ತಡೆಗಟ್ಟಲಾಗುತ್ತದೆ. ಗುತ್ತಿಗೆದಾರರು ಇಬ್ಬರು ಅಥವಾ ಮೂವರು ಮಾಡುವ ಕೆಲಸವನ್ನು ಒಬ್ಬನೇ ಕಾರ್ಮಿಕನಿಂದ ಮಾಡಿಸುವುದರ ಮೂಲಕ ಅವರ ಮೇಲೆ ಕೆಲಸದ ಒತ್ತಡ ಹೇರಿ ಲಾಭವನ್ನು ದೋಚುತ್ತಾರೆ. ಪೌರಕಾರ್ಮಿಕರ ಅಭದ್ರತೆ ಹಾಗೂ ಅವರು ಅತ್ಯಂತ ಕಡಿಮೆ ಕೂಲಿಗೆ ಕೆಲಸ ಮಾಡುವ ಬಗ್ಗೆ ಈಗಾಗಲೇ ಮಾನಸದಲ್ಲಿ ಬರೆಯಲಾಗಿದೆ. ಸಾಮಾನ್ಯ ಪೌರಕಾರ್ಮಿಕನಿಗೆ ಇರಬಹುದಾದ ಆರೋಗ್ಯದ ಅವಗಡಗಳ ಬಗ್ಗೆಯೂ ಅಧ್ಯಯನಗಳು ನಡೆದಿವೆ. ಉಸಿರಾಟದ ತೊಂದರೆಯಿಂದ ಬಳಲುವಂತಹ ಔದ್ಯೋಗಿಕ ಕಾರ್ಯಕ್ಷೇತ್ರ ಹೊಂದಿರುವ ಇವರು ವಾಯುಮಾಲಿನ್ಯದಿಂದಾಗಿ ಇನ್ನಷ್ಟು ತೊಂದರೆ ಅನುಭವಿಸುವಂತಾಗಿದೆ. ಇತ್ತೀಚೆಗೆ ಪೌರಕಾರ್ಮಿಕರ ಸಂಘಟನೆಯ ಹೋರಾಟದ ಒತ್ತಡಗಳಿಂದಾಗಿ ಸರ್ಕಾರ ಈಗ ಸಂಬಳದ ಕುರಿತಾದ ನೀತಿ-ನಿಯಮಗಳಲ್ಲಿ ಬದಲಾವಣೆ ಮಾಡುತ್ತಿದೆ.

ಇದೇ ರೀತಿಯ ಇನ್ನೊಂದು ಅಸಂಘಟಿತ ಅಥವಾ ಅನೌಪಚಾರಿಕ ಕ್ಷೇತ್ರವೆಂದರೆ ಗಾರ್ಮೆಂಟ್ಸ್. ಗಾರ್ಮೆಂಟ್ಸ್ ಮಹಿಳಾ ಕಾರ್ಮಿಕರ ಹೋರಾಟವನ್ನು 'ಮಾನಸ' ಸುದೀರ್ಘವಾಗಿ ಪ್ರಕಟಿಸಿದೆ. ಗಾರ್ಮೆಂಟ್ಸ್ ಹಾಗೂ ಟೆಕ್ಸ್‌ಟೈಲ್ ವರ್ಕರ್ಸ್ ಕಾರ್ಮಿಕ ಸಂಘಟನೆ ನಡೆಸಿದ ಇತ್ತೀಚಿನ ಅಧ್ಯಯನದಲ್ಲಿ ಸಾಮಾನ್ಯವಾಗಿ ಕುಟುಂಬಕ್ಕಾಗಿ ತಿಂಗಳಲ್ಲಿ ಖರ್ಚಾಗುವ ಅರ್ಧದಷ್ಟನ್ನೂ ಕೂಡಾ ಗಾರ್ಮೆಂಟ್ಸ್ ಕ್ಷೇತ್ರದ ಕನಿಷ್ಠ ಸಂಬಳ ಭರಿಸುವುದಿಲ್ಲ ಎಂಬುದನ್ನು ಹೇಳುತ್ತದೆ. ಹೆಚ್ಚು ಸಾಲದ ಹೊರೆ ಹೊಂದಿರುವ ಇವರು ಹೆಚ್ಚುವರಿ ಕೆಲಸದ ಮೇಲೆ ಅವಲಂಬಿತರಾಗಿರುವುದು ಸಾಮಾನ್ಯವಾದ ಅಂಶವಾಗಿದೆ. ನಿಜವೆಂದರೆ ಪ್ರತಿ ವರ್ಷ ಸಂಬಳ ಏರಿಕೆಯಾಗುವ ಬದಲು ಕೆಲಸದ ಒತ್ತಡ ಹೆಚ್ಚುತ್ತಿರುತ್ತದೆ. ಟಾರ್ಗೆಟ್‌ನ ಗುರಿ ತಲುಪುವ ಉತ್ಪಾದನೆಯ ಗಡುವು ಹಾಗೂ ಅಮಾನವೀಯ ಸ್ಥಿತಿಯ ಕೆಲಸದ ಒತ್ತಡ ವರ್ಷ ವರ್ಷವೂ ಹೆಚ್ಚಾಗುತ್ತಿರುವುದರಿಂದ ಗಾರ್ಮೆಂಟ್ಸ್ ಕ್ಷೇತ್ರದಲ್ಲಿ 100% ಕಾರ್ಮಿಕರು ಇದ್ದೇ ಇರಬೇಕಾದಂತಹ ಪರಿಸ್ಥಿತಿ ಇದೆ. 40 ವರ್ಷ ತಲುಪುವ ವೇಳೆಗೆ ದೀರ್ಘಕಾಲ ಕಷ್ಟಪಟ್ಟು ಮಾಡುವ ಕೆಲಸದಿಂದಾಗಿ ಮತ್ತು ಭಯಂಕರ ಕಾಹಿಲೆಯಿಂದ ಟಿ.ಬಿ.ಗೆ ಬಲಿಯಾಗಿ ಕಾರ್ಮಿಕರು ಬರಿಗೈಯಲ್ಲಿ ಸುಸ್ತಾಗಿ ಬಿಟ್ಟಿರುತ್ತಾರೆ.

ಮನೆಗೆಲಸದ ಕ್ಷೇತ್ರ ಇನ್ನೊಂದು ಅನೌಪಚಾರಿಕ ಉದ್ಯೋಗದ ಕ್ಷೇತ್ರವಾಗಿದೆ. ಇಲ್ಲಿ ಮಹಿಳೆಯರೇ ಹೆಚ್ಚಾಗಿ ದುಡಿಯುವವರು. ಈ ಕ್ಷೇತ್ರದಲ್ಲಿ ಯು ನೀತಿ-ನಿಯಮ ಅಥವಾ ಸವಲತ್ತುಗಳೂ ಇಲ್ಲ. ಇಲ್ಲಿ ಕೆಲಸದ ಅಧಿಕಾರಿ ತನ್ನ ಇಷ್ಟ-ಅನಿಷ್ಟಗಳ ಪ್ರಕಾರವೇ ಸಂಬಳ ಹಾಗೂ ಕೆಲಸದ ಸ್ಥಿತಿ-ಗತಿಗಳನ್ನು ನಿರ್ಧರಿಸುತ್ತಾನೆ. ಬೆಲೆ ಏರಿಕೆಯ ಈ ಸಂದರ್ಭದಲ್ಲಿ ಮನೆಗೆಲಸದ ಮಹಿಳೆಯರು ತಮ್ಮ ಕೆಲಸದ ಅವಧಿಯನ್ನು ಹೆಚ್ಚಿಸಿಕೊಳ್ಳುವ ಮೂಲಕ ಹಾಗೂ ಕೆಲಸದ ಒತ್ತಡ ಹಂಚಿಕೊಳ್ಳಲು ತಮ್ಮ ಹೆಣ್ಣು ಮಕ್ಕಳಿಗೆ ಶಾಲೆ ಬಿಡಿಸುವುದರ ಮೂಲಕ ಬದುಕಿ ಉಳಿಯುವ ಪ್ರಯತ್ನವನ್ನು ಮಾಡುತ್ತಾರೆ. ಈ ಕ್ಷೇತ್ರದಲ್ಲಿ ಬಯ್ಯುವುದು, ಹಿಂಸೆ ಹಾಗೂ ಲೈಂಗಿಕ ಕಿರುಕುಳ ಸಾಮಾನ್ಯವಾದ ಅಂಶಗಳಾಗಿವೆ. ಮನೆಗೆಲಸದ ಕಾರ್ಮಿಕರ ಹಲವಾರು ವರ್ಷಗಳ ಹೋರಾಟದ ಫಲವಾಗಿ ಮನೆಕೆಲಸವನ್ನು ನಿಯಂತ್ರಿಸುವ ಹಲವಾರು ನಿಯಮಾವಳಿಗಳನ್ನು ರೂಪಿಸಿದವರಲ್ಲಿ ಕರ್ನಾಟಕವೂ ಒಂದು. ಇದು ವಾರದ ರಜೆ, 14 ವರ್ಷದ ಒಳಗಿನ ಮಗು ಕೆಲಸ ಮಾಡುವುದರ ನಿಷೇಧ ಹಾಗೂ ಕನಿಷ್ಠ ಸಂಬಳವನ್ನು ಒಳಗೊಂಡಿದೆ. ಕನಿಷ್ಠ ಕೂಲಿಯನ್ನು ಲೆಕ್ಕ ಮಾಡುವಾಗ ಯಾವುದೋ ಕ್ಲಿಷ್ಟಕರ ಲೆಕ್ಕಾಚಾರ ಬಳಸಿರುವುದರಿಂದ ಕನಿಷ್ಠ ಕೂಲಿ ಕಾರ್ಮಿಕರ ನಿಜವಾದ ಬದುಕಿನ ಖರ್ಚನ್ನು ಭರಿಸುವುದಿಲ್ಲ. ಈ ಕ್ಷೇತ್ರದಲ್ಲಿನ ಆರೋಗ್ಯದ ಸಮಸ್ಯೆ, ತಮ್ಮ ಜೀವನದಲ್ಲಿ ಈ ಕಾರ್ಮಿಕರು ಮುಖಾಮುಖಿಯಾಗುವ ದೈಹಿಕ ಹಾಗೂ ಮಾನಸಿಕ ಸಮಸ್ಯೆಗಳನ್ನು ಕುರಿತಾದ ಕಾನೂನುಗಳೇ ಇಲ್ಲ. ಈ ಸಮಸ್ಯೆಗಳನ್ನು ಕಾರ್ಮಿಕರು ವೈಯಕ್ತಿಕವಾಗಿಯೇ ಬಗೆಹರಿಸಿಕೊಳ್ಳಬೇಕು.

ಈ ಮೂರೂ ಅನೌಪಚಾರಿಕ ಕ್ಷೇತ್ರಗಳ ವಿಶ್ಲೇಷಣೆಯಿಂದ ಹೊರಹೊಮ್ಮುವ ಸಂಗತಿಯೆಂದರೆ ಕನಿಷ್ಠ ಕೂಲಿಯ ಕೊರತೆ, ಅಮಾನವೀಯ ನೆಲೆಯ ಕೆಲಸದ ಒತ್ತಡಗಳು ಹಾಗೂ ಆರೋಗ್ಯದ ಅವಗಡಗಳು. ಆದರೆ ಸಮಾಧಾನಕರ ಅಂಶವೆಂದರೆ ಅಸಂಘಟಿತ ಎಂದರೆ ಕಾರ್ಮಿಕರಲ್ಲಿ ಸಂಘಟನೆಯ ಕೊರತೆ ಎಂದೇನೂ ಅಲ್ಲ. ಪೌರಕಾರ್ಮಿಕರು, ಗಾರ್ಮೆಂಟ್ಸ್ ಕಾರ್ಮಿಕರು, ಮನೆಗೆಲಸದವರು, ಅಂಗನವಾಡಿ ಕಾರ್ಯಕರ್ತೆಯರು, ಕಟ್ಟಡದ ಕಾರ್ಮಿಕರು ಹಾಗೂ ಇತರರು ಸಂಘಟಿತರಾಗ ತೊಡಗಿದ್ದಾರೆ. ಅವರ ಹೋರಾಟಗಳು ಸರ್ಕಾರದ ವಿರುದ್ಧ ಮಾತ್ರವಲ್ಲ, ಶ್ರೀಮಂತ ಬಂಡವಾಳಶಾಹಿಗಳ ವಿರುದ್ಧವೂ ಆಗಬೇಕಾಗಿದೆ. ಇವರು ಮೂಲದಲ್ಲಿ ಕೆಲಸ ನೀಡುವ ಅಧಿಕಾರಿಗಳಾಗಿರುತ್ತಾರೆ. ಇವರು ಅನೌಪಚಾರಿಕ ಕ್ಷೇತ್ರದ ಉದ್ಯೋಗದ ಲಕ್ಷಣಗಳಿಂದ ಹಾಗೂ ಕ್ರಿಮಿನಲ್ ಆಗಿ ಉಪಗುತ್ತಿಗೆ ನೀಡುವ ಮೂಲಕ ಅಗಾಧ ಪ್ರಮಾಣದ ಲಾಭ ಪಡೆಯುತ್ತಿರುತ್ತಾರೆ.

**ಹಾಗಾಗಿ ಅಸಂಘಟಿತ ಅಥವಾ ಅನೌಪಚಾರಿಕ ಉದ್ಯೋಗದ ಕಾರ್ಮಿಕರ ಬೇಡಿಕೆಗಳೆಂದರೆ**

1. ಉದ್ಯೋಗದ ಮೇಲೆ ನಿಯಂತ್ರಣ – ಈ ಮೂಲಕ ಈಗಿರುವ ಕನಿಷ್ಠ ಸಂಬಳವನ್ನು ನೀಡುವಂತೆ ಒತ್ತಡ ಹೇರುವುದು. ಈಗಿರುವ ಕನಿಷ್ಠ ಕೂಲಿ ಕಾರ್ಮಿಕರ ಬದುಕಿನ ಖರ್ಚು-ವೆಚ್ಚಗಳನ್ನು ಸರಿದೂಗಿಸಲಾಗದ ಕಾರಣ ಒಂದು ವೈಜ್ಞಾನಿಕ ದೃಷ್ಟಿಯಿಂದ ಲೆಕ್ಕಚಾರ ಮಾಡಿ ಕನಿಷ್ಠ ಸಂಬಳವನ್ನು ನಿಗದಿ ಪಡಿಸಬೇಕಾಗಿದೆ.

2. ಕೆಲಸದ ಸ್ಥಳದಲ್ಲಿ ನಿಯಂತ್ರಣ ಇರಬೇಕಾಗುತ್ತದೆ. ಹಿಂಸೆ ಹಾಗೂ ಕಿರುಕುಳಗಳಿಲ್ಲದೇ ಸೌಹಾರ್ದತೆಯ ಅಂಶಗಳು ಮೌಲ್ಯಗಳಾಗಿವೆ ಎಂಬುದನ್ನು ದೃಢಪಡಿಸುವ ವ್ಯವಸ್ಥೆ ಇರಬೇಕಾಗುತ್ತದೆ.

3. ಮಕ್ಕಳನ್ನು ನೋಡಿಕೊಳ್ಳುವ ಹಾಗೂ ಇತರೆ ಸಾಮಾಜಿಕ ಭದ್ರತೆಗಳನ್ನು ಮಹಿಳಾ ಕಾರ್ಮಿಕರಿಗೆ ನೀಡುವುದು ಅಗತ್ಯವಾದ ವಿಚಾರವಾಗಿದೆ. ಪ್ರಪಂಚದೆಲ್ಲೆಡೆ ಮಹಿಳಾ ಕಾರ್ಮಿಕರು ಮಹಿಳಾ ಹೋರಾಟದ ಮುಂಚೂಣಿಯಲ್ಲಿದ್ದಾರೆ. ಮೇ ದಿನದ ಈ ಸಂದರ್ಭದಲ್ಲಿ ನಾವು ಅವರ ಹೋರಾಟದೊಂದಿಗೆ ಕೈ ಜೋಡಿಸುವ ದೃಢ ನಿರ್ಧಾರ ಮಾಡೋಣ.

**ಮಾನಸದ ಓದುಗರಿಗೆ ಕಾರ್ಮಿಕ ದಿನಾಚರಣೆಯ ಶುಭಾಶಯಗಳು** ❑



# ಕನಸಿನ ಮಕ್ಕಳ ಕತ್ತಲ ಲೋಕ

■ ಶೀತಲ ಭಟ್

ಚಿನ್ನದ ಚಮಚವನ್ನು ಬಾಯಲ್ಲಿಟ್ಟುಕೊಂಡೇ ಹುಟ್ಟಿ, ಅಪ್ಪ ಅಮ್ಮಂದಿರ ಮುದ್ದಿನ ಕೂಸುಗಳಾಗಿ ಬೆಳೆಯುವ ಮಕ್ಕಳು... ಜೋಪಡಿಯಲ್ಲೆಲ್ಲೋ ಜನಿಸಿ, ತಿನ್ನಲು ಇನ್ನೊಂದು ಬಾಯಿ ಹೆಚ್ಚಾಯಿತೆಂದು ನಿಟ್ಟುಸಿರಾಗುವ ಅಪ್ಪ ಅಮ್ಮಂದಿರ ಅಸಹಾಯಕತೆಗೆ ಕನ್ನಡಿಯಾಗುವ ಕೂಸುಗಳು... ಬ್ರಾಂಡೆಡ್ ಶೂಗಳಿಲ್ಲವೆಂದೋ, ಪರೀಕ್ಷೆಯಲ್ಲಿ 95% ಬರಲಿಲ್ಲವಾದ್ದರಿಂದ ಪ್ರತಿಷ್ಠೆಗೆ ಕುಂದಾಯಿತೆಂದೋ, ಟಿ.ವಿಯಲ್ಲಿ ತನ್ನ ಇಷ್ಟದ ಚಾನೆಲ್ ನೋಡಲು ಬಿಡಲಿಲ್ಲವೆಂದೋ ಆತ್ಮಹತ್ಯೆಗಿಳಿಯುವ ಮಕ್ಕಳೊಂದೆಡೆ... ಊಟವಿಲ್ಲದೇ, ಅಪೌಷ್ಟಿಕತೆಯಿಂದ ಸಾಯುವ, ಕೃಷಿಯಿಂದ ಹಿಡಿದು ಹೋಟೆಲ್, ಮೈನಿಂಗವರೆಗೆ ಎಲ್ಲ ಕ್ಷೇತ್ರಗಳಲ್ಲೂ ವಯಸ್ಸಿಗೆ ಮೀರಿದ ದುಡಿಮೆ ಮಾಡುವ ಆಸೆಗಂಗಳ ಮಕ್ಕಳು ಇನ್ನೊಂದೆಡೆ. ಆಧುನಿಕ ಯುಗದಲ್ಲಿ ಇಂತಹ ವೈರುಧ್ಯಗಳನ್ನು ದಿನವೂ ಕಾಣುತ್ತ ಬದುಕುವ ನಮಗೆ ಸಮಸ್ಯೆಯ ಆಳದ ಅರಿವು ಚೆನ್ನಾಗಿ ಇರಬೇಕಿತ್ತು. ಆದರೆ ಈ ತಾರತಮ್ಯವನ್ನು, ಅಗಾಧ ಅಂತರವನ್ನು ಸಹಜವೆಂದು ಸ್ವೀಕರಿಸಿ ಬಿಟ್ಟಿರುವುದು ನಮ್ಮ ಕಾಲದ ದುರಂತ.

ದಿನಬೆಳಗಾದರೆ ಎದುರಿನ ಮನೆ ಕಟ್ಟಡ ಕೆಲಸದಲ್ಲೋ, ನಾವು ಹೋಗುವ ಹೊಟೇಲ್‌ನಲ್ಲೋ, ಚಪ್ಪಲಿ ಹೊಲಿಯುವ ಅಂಗಡಿಯಲ್ಲೋ ಮುಗ್ಧ ಮಕ್ಕಳು ಕೆಲಸ ಮಾಡುತ್ತಾ, ಜನಗಳು ಕೊಡುವ ಬಿಡಿಗಾಸನ್ನು ಆಸೆಗಣ್ಣಿನಿಂದ ಸ್ವೀಕರಿಸುವುದನ್ನು ನಾವು ನೋಡುತ್ತೇವೆ. ಭಾರತದಲ್ಲಿ 12.6 ಮಿಲಿಯನ್ ಮಕ್ಕಳು ಬಾಲಕಾರ್ಮಿಕರು. ಇದು ಅಂಕಿ ಅಂಶಗಳಿಗೆ ಸಿಕ್ಕ ಲೆಕ್ಕವಷ್ಟೆ. ಮಹಿಳೆಯು ಮಾಡುವ ಅನೇಕ ಕೆಲಸಗಳು ಕೆಲಸದ ವ್ಯಾಖ್ಯಾನದ ಅಡಿಯಲ್ಲೆ ಬರುವುದಿಲ್ಲವಾದ್ದರಿಂದ ಅನೇಕ ಪುಟ್ಟ ಹೆಣ್ಣುಮಕ್ಕಳು ಅಂಕಿ ಅಂಶಗಳಿಗೆ ಸಿಗದೇ ಹೋಗುತ್ತಾರೆ. ಬಡಕುಟುಂಬಗಳಲ್ಲಿ ಹೆಣ್ಣುಮಕ್ಕಳು ತಮ್ಮ ಪುಟ್ಟ ತಮ್ಮಂದಿರನ್ನು ನೋಡಿಕೊಳ್ಳುವುದು, ಅಡಿಗೆ, ಮನೆಗೆಲಸ ಹೀಗೆ ಬೆಳಗಿನಿಂದ ರಾತ್ರಿಯವರೆಗೆ ದುಡಿದು, ಅತ್ತ ಬಾಲಕಾರ್ಮಿಕರ ಪಟ್ಟಿಗೂ ಸೇರದೇ, ಇತ್ತ ಶಾಲೆಗೆ ಹೋಗುವ ಮಕ್ಕಳ ಸಾಲಿಗೂ ಸೇರದೆ ಅವರ ಅಸ್ತಿತ್ವವೇ ಅದೃಶ್ಯವಾಗುತ್ತಿದೆ.

ಮನೆಯೊಳಗಷ್ಟೇ ಅಲ್ಲದೇ ಇನ್ನಿತರ ಕೆಲಸಗಳಲ್ಲೂ ಹೆಣ್ಣುಮಕ್ಕಳು ತೊಡಗಿಕೊಳ್ಳುತ್ತಿದ್ದಾರೆ. ಒಂದು ಸರ್ವೆಯ ಪ್ರಕಾರ ಭಾರತದಲ್ಲಿ ತಿಂಗಳಿಗೆ ಹೆಣ್ಣುಮಕ್ಕಳು ಸುಮಾರು 29.4 ದಿನ ಕೆಲಸ ಮಾಡಿದರೆ 22.2 ದಿನಗಳು ಹೆಂಗಸರೂ, 18.6 ದಿನ ಗಂಡಸರೂ ಕೆಲಸ ಮಾಡುತ್ತಾರೆ. ಆದರೆ ಒಂದು ಕುಟುಂಬದ ಆರ್ಥಿಕ ಗಳಿಕೆಯಲ್ಲಿ 28.7% ಮಕ್ಕಳ ಕೊಡುಗೆಯೂ, 28.3% ಹೆಂಗಸರದೂ, 42.8% ಗಂಡಸರ ಪಾಲೂ ಇರುತ್ತದೆಯೆಂದರೆ ಹೆಣ್ಣುಮಕ್ಕಳು ಪಡೆಯುವ ಕೂಲಿಯ ಮೊತ್ತದ ಅಂದಾಜು ನಮಗಾಗುತ್ತದೆ. ಅನೇಕ ಕೃಷಿ ಹಾಗೂ ಕಾರ್ಖಾನೆಗಳ ಮಾಲಿಕರು ಹೆಣ್ಣುಮಕ್ಕಳಿಗೇ ಆದ್ಯತೆ ನೀಡುತ್ತಾರೆ. ಕಡಿಮೆ ಕೂಲಿಗೆ ಹೆಚ್ಚು ಕೆಲಸವಲ್ಲದೇ ಅನೇಕ ವೇಳೆ ಮಾಲಿಕರ ದುಶ್ಚಟಗಳಿಗೆ ಬಳಕೆಯಾಗುವುದೂ ಉಂಟು.. ಚಿಕ್ಕವರಾದ್ದರಿಂದ ಹೆದರಿಸಿ ಬೆದರಿಸಿ, ಬಡತನದಲ್ಲಿ ಕಂಗೆಟ್ಟ ಮಕ್ಕಳಿಗೆ ತಿಂಡಿ, ಬಟ್ಟೆ, ಆಟಿಕೆಗಳ ಆಸೆ ತೋರಿಸಿ ತಮ್ಮ ಸುಖಕ್ಕೆ ಬಳಸಿಕೊಳ್ಳುವವರೂ ನಮ್ಮಲ್ಲಿ ಕಡಿಮೆ ಇಲ್ಲ. ಬಡತನವನ್ನು ಬಳಸಿಕೊಂಡು ಮಕ್ಕಳನ್ನು ಲೈಂಗಿಕ ಕಾರ್ಯಕ್ಕೆ ದೂಕಿ ಅವರನ್ನು ಬೇಗ ದೊಡ್ಡವರಂತೆ ಕಾಣಲು ವಿವಿಧ ಮಾತ್ರೆಗಳನ್ನು ನೀಡಿ,ಅವರಿಂದ ಹೆಚ್ಚು ಹೆಚ್ಚು ಗಿರಾಕಿಗಳನ್ನು ಸಂತುಷ್ಟಪಡಿಸಿ ಹಣ ಗಳಿಸುವುದು ಇದರ ಇನ್ನೊಂದು ಭೀಕರ ಮುಖ.

ಈ ಮಕ್ಕಳು ಬೌದ್ಧಿಕ ವಿಕಾಸಕ್ಕೆ ತಳಹದಿಯಾದ ಶಿಕ್ಷಣದಿಂದ ವಂಚಿತರಾಗುವುದಲ್ಲದೇ, ಲೈಂಗಿಕ ಕಾರ್ಯ, ಮೈನಿಂಗ್‌ನಂತಹ ಕೆಲಸಗಳಿಂದ ಚಿಕ್ಕವಯಸ್ಸಿನಲ್ಲೇ ಭಯಾನಕ ರೋಗಗಳಿಗೆ ತುತ್ತಾಗುತ್ತಿದ್ದಾರೆ. ಅಂದರೆ 12.6 ಮಿಲಿಯನ್‌ಗೂ ಹೆಚ್ಚು ಮಕ್ಕಳು ಅಪೌಷ್ಟಿಕರಾಗಿ ಬೆಳೆದು, ದೈಹಿಕ ಮತ್ತು ಭೌದ್ಧಿಕ ಅಶಕ್ತತೆಯಿಂದ ಕೂಡಿದ ಪ್ರಜೆಗಳಾದರೆ ಯಾವ ರೀತಿಯ ಸಮಾನತೆ, ಅಭಿವೃದ್ಧಿ ಸಾಧ್ಯವಾಗಬಹುದೆಂಬುದು ಆತಂಕಕಾರಿ ಪ್ರಶ್ನೆ...

ಬಾಲ ಕಾರ್ಮಿಕರ ಸಮಸ್ಯೆ ನಿಂತಿರುವುದೇ ಬಡತನ ಮತ್ತು ರೋಗಗ್ರಸ್ತ ಸಮಾಜದ ಮನಸ್ಥಿತಿಯ ಮೇಲೆ. ವಿದ್ಯಾಭ್ಯಾಸ, ನೈತಿಕತೆಗಳೆಲ್ಲ ಹಸಿವಿನ ಮುಂದೆ ಗೌಣವಾಗುತ್ತದೆ. ಮೊದಲೇ ಹೇಳಿದಂತೆ ನಾವು ಎಂತಹ ಸ್ಥಿತಿ ತಲುಪಿರುವೆವೆಂದರೆ, ಉಳ್ಳವರು ಉಳ್ಳವರಾಗಿಯೇ ಉಳಿದು, ಬಡವರು ಬಡವರಾಗಿಯೇ ಉಳಿದಾಗ ಮಾತ್ರ ಎಲ್ಲವೂ ಸಹಜ, ಸುಗಮ ಎಂದೆನ್ನಿಸುತ್ತದೆ. ಬಡವರ್ಗವಾಗಲೀ, ಮಹಿಳೆಯಾಗಲೀ ಸಮಾನತೆಯೆಡೆಗಿನ ಹೆಜ್ಜೆ ಇಟ್ಟಾಗಲೆಲ್ಲ ಸ್ಥಾಪಿತ ಹಿತಾಸಕ್ತಿಗಳು ಅವರನ್ನು ಹತ್ತಿಕ್ಕುವ ಕಾರ್ಯವನ್ನು ವ್ಯವಸ್ಥಿತವಾಗಿ ಮಾಡುತ್ತಲೇ ಬಂದಿದೆ. ನಾವು ಬಡವರ, ಬಾಲಕಾರ್ಮಿಕರ, ಮಹಿಳೆಯರ ಸಮಸ್ಯೆ ಅವರವರ ಸಮಸ್ಯೆಯೆಂದು ಭಾವಿಸದೇ ಒಟ್ಟು ಸಮಾಜದ ಸಮಸ್ಯೆಯೆಂದು ಭಾವಿಸಿ ಒಟ್ಟಾಗಿ ಹೆಜ್ಜೆ ಇಟ್ಟಾಗ ಮಾತ್ರ ಪ್ರಗತಿ ಸಾಧ್ಯವಾಗಬಹುದು. ❑

# 'ಬ್ಯಾರಿ' : ಧರ್ಮದ ಮಿತಿಯೊಳಗೆ ಪ್ರತಿರೋಧದ ನೆಲೆ

■ ಲೇಖಾ ಅಡವಿ

ಶ್ರೇಷ್ಠ ಚಿತ್ರಕ್ಕೆಂದು ನೀಡಲಾಗುವ ಸ್ವರ್ಣ ಕಮಲ ಪ್ರಶಸ್ತಿಯನ್ನು ಮರಾಠಿ ಚಿತ್ರದೊಂದಿಗೆ ಕರ್ನಾಟಕದ 'ಬ್ಯಾರಿ ಚಿತ್ರ' ಹಂಚಿಕೊಂಡಿದೆ.

ಸುಮಾರು 1618 ಭಾಷೆಗಳು ಚಾಲ್ತಿಯಲ್ಲಿರುವ ದೇಶವಿದು. ಅವುಗಳಲ್ಲಿ ರಾಷ್ಟ್ರೀಯ ಭಾಷೆ ಸ್ಥಾನ ಸಿಕ್ಕಿರುವುದು ಕೇವಲ 15 ಸಮುದಾಯ ಭಾಷೆಗಳಿಗೆ ಮಾತ್ರ. ಪುಟ್ಟ ಒಂದು ಸಮುದಾಯ ಮಾತನಾಡುವ 'ಬ್ಯಾರಿ' ಭಾಷೆಯಲ್ಲಿ ಸಂಕೀರ್ಣವಾದ ಮಹಿಳಾ ವಿಷಯ ವಸ್ತುವನ್ನು ಆಧರಿಸಿ ಮಾಡಿರುವ ಚಿತ್ರಕ್ಕೆ ಅತ್ಯುನ್ನತ ರಾಷ್ಟ್ರೀಯ ಪ್ರಶಸ್ತಿ ಸಿಕ್ಕಿರುವುದು ವಿಶೇಷ.

ಲಿಂಗ ತಾರತಮ್ಯದ ಮೂಲಬೇರಾದ ಪಿತೃ ಪ್ರಧಾನತೆಯೊಂದಿಗೆ ಧಾರ್ಮಿಕ ಮೂಲಭೂತವಾದವೂ ಸೇರಿಕೊಂಡಾಗ ಮಹಿಳೆಯರ ಬದುಕು ಕಟ್ಟುಪಾಡುಗಳಲ್ಲಿ ಬಂಧಿಯಾಗಿ ಸ್ವಾತಂತ್ರ್ಯ, ಸಮಾನತೆ ಎಂಬುದು ಕಗ್ಗಂಟಾಗಿಬಿಡುತ್ತದೆ. ತನ್ನದಷ್ಟೇ ಸರಿ, ಶ್ರೇಷ್ಠ ಎಂಬ ವ್ಯಸನ ಹತ್ತಿಸಿಕೊಂಡು ಧಾರ್ಮಿಕ ಉಗ್ರಗಾಮಿತ್ವವು ಒಂದೇ ಧರ್ಮಕ್ಕೆ ಸೀಮಿತವಲ್ಲ. ಆದರೂ ನಮ್ಮ ದೇಶವನ್ನೂ ಒಳಗೊಂಡಂತೆ ಒಟ್ಟಾರೆ ಜಾಗತಿಕ ವಾತಾವರಣದಲ್ಲಿ ಧಾರ್ಮಿಕ ಉಗ್ರಗಾಮಿಗಳೆಂದರೆ ಮುಸಲ್ಮಾನರೆಂದು ಬಿಂಬಿಸುವ ಪ್ರಯತ್ನ ವ್ಯವಸ್ಥಿತವಾಗಿ ನಡೆಯುತ್ತಿದೆ. ಇದರ ಪರಿಣಾಮ ತಮ್ಮದೆ ನೆಲದಲ್ಲಿ ಪರಕೀಯತೆಯನ್ನು ಅನುಭವಿಸುವ ಸ್ಥಿತಿ ಉಂಟಾಗಿದೆ.

ಇಂತಹ ಪರಿಸ್ಥಿತಿಯಲ್ಲೂ ಧಾರ್ಮಿಕ ಮೂಲಭೂತವಾದವನ್ನು ಸಮಾನತೆ, ಸಹಬಾಳ್ವೆಯನ್ನು ನಂಬುವ ಪ್ರಜ್ಞಾವಂತರು ಕಲೆ, ಸಾಹಿತ್ಯ, ಸಿನಿಮಾ ಇತ್ಯಾದಿ ಮೂಲಕ ಪ್ರತಿರೋಧಿಸುತ್ತಾ ಬಂದಿರುವುದು ಸಹ ವಾಸ್ತವವೇ ಆಗಿದೆ.

ಅಂತಹದೊಂದು ಪುಟ್ಟ ಪ್ರಯತ್ನವನ್ನು 'ಬ್ಯಾರಿ' ಸಿನಿಮಾ ಮಾಡಿದೆ. ಮುಸ್ಲಿಂ ಮಹಿಳಾ ವಿಷಯವನ್ನು ಆಧರಿಸಿದ ಮುನ್ನುಡಿ, ಹಸೀನಾ, ಗುಲಾಬಿ ಟಾಕೀಸ್‌ನಂತಹ ಚಿತ್ರಗಳು ಈಗಾಗಲೇ ಬಂದಿವೆ. ಮುಸ್ಲಿಂ ಸಮುದಾಯದವರು ತಮ್ಮದೇ ಭಾಷೆಯಲ್ಲಿ, ತಮ್ಮ ಸಮುದಾಯದ ಕಗ್ಗಂಟಾದ ವಿಷಯವನ್ನಿಟ್ಟುಕೊಂಡು ಉತ್ತಮ ಚಿತ್ರ ಮಾಡಿರುವುದು ಅಭಿನಂದನಾರ್ಹ.

ಕರ್ನಾಟಕದ ನಾಡು, ನುಡಿ, ಸಂಸ್ಕೃತಿಯ ಭಾಗವಾಗಿರುವ ಬ್ಯಾರಿಗಳ ಮುಖ್ಯ ವೃತ್ತಿ ವ್ಯಾಪಾರ. ಬ್ಯಾರಿಯ ಮೂಲಪದ 'ಬ್ಯಾರ'. ತುಳುವಿನಲ್ಲಿ ಬ್ಯಾರ ಎಂದರೆ ವ್ಯಾಪಾರ. ಕರಾವಳಿ ಪ್ರದೇಶದಲ್ಲಿ ಹೆಚ್ಚಾಗಿ ವಾಸಿಸುವ ಈ ಸಮುದಾಯದವರು ಆಡುವ ಮಾತು 'ಬ್ಯಾರಿ'.

ಕೇವಲ 12 ವರ್ಷದ ನಾದಿರಾಳನ್ನು ಅವಳಿಗಿಂತ ವಯಸ್ಸಿನಲ್ಲಿ ಎಷ್ಟೋ ದೊಡ್ಡವನಾದ ರಶೀದನೊಂದಿಗೆ ಮದುವೆ ಮಾಡಿಕೊಡಲಾಗುತ್ತದೆ. ಸಭ್ಯ ಹುಡುಗಿಯರನ್ನು ಹಿರಿಯ ಗಂಡಸರೊಂದಿಗೆ ಮದುವೆ ಮಾಡಿಕೊಡುವುದು ಅದೆಷ್ಟು ಮಾಮೂಲಿ ವಿಷಯವೆಂದರೆ, ಸಿನಿಮಾದಲ್ಲಿ ನಾದಿರಾಳ ಬಾಲ್ಯ ಸ್ನೇಹಿತ ಮದುವೆಯಾಗುತ್ತೇನೆ ಎಂದಾಗ ಅವಳು 'ನಿನಗೆ ಮೀಸೆ ಇಲ್ಲ, ತಲೆಕೂದಲು ಉದುರಿಲ್ಲ, ಹೊಟ್ಟೆ ದಪ್ಪದಾಗಿಲ್ಲ ಹೇಗೆ ಮದುವೆಯಾಗುತ್ತಿಯಾ?' ಎಂದು ಕೇಳುತ್ತಾಳೆ. ಮಕ್ಕಳಾಟದ ಮಾತಿನಲ್ಲಿ ಬರುವ ಈ ದೃಶ್ಯ ನಗುವಿನ ಜೊತೆಗೆ ವಿಷಾದ ಮೂಡಿಸುತ್ತದೆ.

ಮದುವೆಯ ನಂತರದ ಬದುಕು ಸುಗಮವಾಗಿಯೇ ಸಾಗಿ ಒಂದು ಮಗುವೂ ಆಗುತ್ತದೆ. ಸಮಸ್ಯೆ ಶುರುವಾಗುವುದು ನಾದಿರಾಳ ತಂಗಿಯ ಮದುವೆಯ ಪ್ರಯತ್ನದೊಂದಿಗೆ. ನಾದಿರಾಳ ಅಪ್ಪ, ತನ್ನ ಎರಡನೆ ಮಗಳ ಮದುವೆ ಖರ್ಚು ನಿಭಾಯಿಸಲು ಹಣ ಸಹಾಯ ನೀಡೆಂದು ಅಳಿಯನನ್ನು ಕೇಳುತ್ತಾನೆ. ತಾನು ಕಷ್ಟದಲ್ಲಿರುವುದರಿಂದ ಕೊಡಲು ಸಾಧ್ಯವಿಲ್ಲವೆಂದು ರಶೀದ್ ಹೇಳಿದಾಗ ಜೋರುದನಿಯಲ್ಲಿ ಕೂಗಾಡುತ್ತಾನೆ. ಕೆಲಸದ ಜಾಗದಲ್ಲಿ ಎಲ್ಲರೆದುರು ಕೂಗಾಡಬೇಡಿ ಅವಮಾನವಾಗುತ್ತದೆ ಎಂದ ಅಳಿಯನ ಮಾತಿಗೆ ಕೋಪಗೊಂಡು



ಸೀದಾ ಮಗಳ ಮನೆಗೆ ಹೋಗಿ ಅವಳ ತಾಯಿ ನೋಡಬೇಕೆಂದು ಹೇಳಿದ್ದರಿಂದ ಕರೆದುಕೊಂಡು ಹೋಗುವೆನೆಂದು ಸುಳ್ಳು ಹೇಳಿ ಮನೆಗೆ ಕರೆದುಕೊಂಡು ಹೋಗುತ್ತಾನೆ.

ನಂತರ ಮಗಳ ಇಚ್ಛೆಗೆ ವಿರುದ್ಧವಾಗಿ ಅಳಿಯನ ಬಳಿ ಅವಳೇ ತಲಾಖ್ ಕೇಳಿದ್ದಾಳೆಂದು ಸುಳ್ಳು ಹೇಳಿ ತಲಾಖ್ ಕೊಡುವಂತೆ ಮಾಡುತ್ತಾನೆ. ಆ ಮೇಲೆ ರಶೀದನ ತಾಯಿ ಸೊಸೆಯ ತೌರು ಮನೆಗೆ ಬಂದು ಅವಳ ಕಣ್ತಪ್ಪಿಸಿ ಮಗುವನ್ನು ಕರೆದುಕೊಂಡು ಹೋಗಿ ಬಿಡುತ್ತಾಳೆ. ತನ್ನನ್ನು ಕರೆದುಕೊಂಡು ಹೋಗಲೆಂದೇ ಅತ್ತೆ ಬಂದಿದ್ದಾಳೆಂದು ಭಾವಿಸಿದ ನಾದಿರ, ಮಗುವನ್ನು ಕದ್ದು ಒಯ್ದುದನ್ನು ಕಂಡು ಮಾನಸಿಕ ಆಘಾತಕ್ಕೆ ಒಳಗಾಗುತ್ತಾಳೆ. ಇದರಿಂದ ಮನನೊಂದ ನಾದಿರಾಳ ಅಪ್ಪ, ಮತ್ತೆ ರಶೀದನೊಂದಿಗೆ ಮರುಮದುವೆ ಮಾಡಿಸುವ ದಾರಿ ಹುಡುಕುತ್ತಾನೆ.



ಧರ್ಮದ ಪ್ರಕಾರ, ನಾದಿರಾ ಬೇರೊಬ್ಬನನ್ನು ಮದುವೆಯಾಗಿ ಮೊದಲ ದಿನ ಅವನೊಂದಿಗೆ ಕಳೆದು, ಮೂರು ತಿಂಗಳು ಕಾದು ಬಸುರಾಗದಿದ್ದರೆ ಮಾತ್ರ ಮೊದಲ ಗಂಡನೊಂದಿಗೆ ಮರುಮದುವೆ ಯಾಗಬಹುದು. ಇದು ಸರಿ ಎನಿಸದ ಅವಳು ಧೈರ್ಯವಹಿಸಿ ಒಬ್ಬಳೆ ಗಂಡನ ಮನೆಗೆ ಹೋಗಿ ಮತ್ತೆ ಒಟ್ಟಿಗೆ ಬದುಕೋಣವೆನ್ನುತ್ತಾಳೆ. ಧರ್ಮದ ವಿರೋಧ ಕಟ್ಟಿಕೊಳ್ಳಲು ಹೆದರುವ ಅತ್ತೆ, ಗಂಡ ಮೂರು ತಿಂಗಳು ಏನೂ ಆಗದಂತೆ ಕಾದರೆ ಮತ್ತೆ ಒಟ್ಟಿಗೆ ಬಾಳಬಹುದಲ್ಲ, ಅದಕ್ಕಾಗಿ ಮಾಡುತ್ತಿರುವ ಪ್ರಯತ್ನವನ್ನು ಹಾಳು ಮಾಡಬೇಡ ಎಂದು ವಾಪಸ್ಸು ಕಳಿಸುತ್ತಾರೆ.

ನಾದಿರಳ ಎರಡನೆ ವರನಾಗಿ ಆರಿಸುವುದು ಅವಳ ಬಾಲ್ಯದ ಸ್ನೇಹಿತನನ್ನೇ. ಹಿಂದಿನಿಂದಲೂ ಅವಳನ್ನು ಪ್ರೀತಿಸುತ್ತಾ ಬಂದಿದ್ದ ಆತ, ಅವಳಿಗೆ ಒಳ್ಳೆಯದಾಗುವುದೆಂಬ ಉದ್ದೇಶಕ್ಕೆ ಒಂದು ದಿನಕ್ಕೆ ಮದುವೆಯಾಗಿ ಅವಳನ್ನು ಮುಟ್ಟದೆ ತಲಾಖ್ ಹೇಳಲು ಒಪ್ಪಿಕೊಳ್ಳುತ್ತಾನೆ. ಮದುವೆಯಾಗಿ ಗಂಡನೊಂದಿಗೆ ದೈಹಿಕ ಸಂಪರ್ಕ ಬೆಳೆಸದೆ, ಮೂರು ತಿಂಗಳು ಕಾದು, ತಲಾಖು ಪಡೆದು ಆ ನಂತರ ಮೊದಲ ಗಂಡನನ್ನೆ ಮರುಮದುವೆಯಾಗಲಿ ಎಂಬುದೇ ಅವಳ ಮೊದಲ ಗಂಡ, ಅತ್ತೆ ಮತ್ತು ಅಮ್ಮ ಅಪ್ಪರ ನಿರೀಕ್ಷೆಯಾಗಿರುತ್ತದೆ.

ಆದರೆ, ನಾದಿರ ಎಲ್ಲರ ನಿರೀಕ್ಷೆಯನ್ನು ಸುಳ್ಳಾಗಿಸಿ ಲೈಂಗಿಕವಾಗಿ ಕೂಡಲು ಎರಡನೇ ಗಂಡನನ್ನು ತಾನೇ ಪ್ರೇರೇಪಿಸುತ್ತಾಳೆ. ಇದಕ್ಕೆ ಧಾರ್ಮಿಕ ಸಮ್ಮತಿಯೂ ಇದೆ. ಗಾಢವಾದ ಧಾರ್ಮಿಕ ನಂಬಿಕೆಯುಳ್ಳ ನಾದಿರ ಧಾರ್ಮಿಕ ಚೌಕಟ್ಟಿನೊಳಗಡೆಯೆ ಪ್ರತಿರೋಧವನ್ನು ದಾಖಲಿಸುತ್ತಾಳೆ. ಇದು ಚಿತ್ರದ ಕ್ಲೈಮ್ಯಾಕ್ಸ್ ಕೂಡ ಹೌದು, ಹೈಲೈಟ್ಸ್ ಕೂಡ ಹೌದು.

ಮದುವೆ ಸಂದರ್ಭದಲ್ಲಿ ಎಲ್ಲರೆದುರು ಹೆಣ್ಣಿನ ಒಪ್ಪಿಗೆ ಪಡೆಯುವುದನ್ನು, ಮರು ಮದುವೆ, ವಿಚ್ಛೇದನ, ವಿಚ್ಛೇದನ ಪಡೆದಾಗ ಮದುವೆಯಲ್ಲಿ ಕೊಡಲಾದ ಮೆಹರ್ ಅನ್ನು ಹಿಂತಿರುಗಿ ಪಡೆಯುವ ಅವಕಾಶವನ್ನು ಮಹಿಳೆಗೆ ಇಸ್ಲಾಂ ಧರ್ಮ ನೀಡುತ್ತದೆ. ಆದರೆ, ಪಿತೃಪ್ರಧಾನತೆ, ಧರ್ಮದ ನಿಯಮಗಳನ್ನು ಬಲು ಜಾಣತನದಿಂದ ಬಳಸಿಕೊಳ್ಳುತ್ತದೆ. ಧರ್ಮವೂ ಸಹ ನಿಯಮಗಳ ಜೊತೆಯಲ್ಲಿಯೇ ಪುರುಷರ ಇಚ್ಛೆಗೆ ಪೂರಕವಾಗಿ ಕೈ ಜೋಡಿಸುತ್ತದೆ. ಇದರ ಮೂಲ ಉದ್ದೇಶ ಮಹಿಳೆಯ ಲೈಂಗಿಕತೆಯನ್ನು ನಿಯಂತ್ರಿಸಿ, ಅವಳ ದುಡಿಮೆ, ಸೇವೆಯ ಲಾಭ ಪಡೆದುಕೊಳ್ಳುವುದಾಗಿದೆ. ಆ ಮೂಲಕ ಶ್ರೇಣೀಕೃತ, ಸಮಾನ ಕುಟುಂಬ ವ್ಯವಸ್ಥೆಯನ್ನು ಪೋಷಿಸಿ ಭದ್ರಮಾಡುವುದಾಗಿದೆ.

ಮಹಿಳೆಯರ ಇಚ್ಛೆ, ಅಗತ್ಯ, ಸಮ್ಮತಿ, ಸ್ವಂತಿಕೆಗಳೆಲ್ಲ ಈ ಪ್ರಕ್ರಿಯೆಯಲ್ಲಿಯೇ ಬಲಿಯಾಗುವುದು.

ಸಂಕೀರ್ಣವಾದ ಸಮಸ್ಯೆಯನ್ನೆತ್ತಿಕೊಂಡು ಪರಿಣಾಮಕಾರಿಯಾದ ಚಿತ್ರ ಮಾಡಿರುವುದು ಶ್ಲಾಘನೀಯ. ಇಂತಹದೊಂದು ದಿಟ್ಟ ಪ್ರಯತ್ನವನ್ನು ಮುಸ್ಲಿಂ ಸಮುದಾಯದವರೇ ಆದ ಸಾರಾ ಅಬೂಬಕ್ಕರ್ ಅವರು ತಮ್ಮ ಬರವಣಿಗೆಯಲ್ಲಿ ದಶಕಗಳ ಹಿಂದೆಯೆ ಮಾಡಿದ್ದನ್ನು ಮರೆಯುವಂತಿಲ್ಲ. 'ಅಂತ್ಯ' ಒಂದನ್ನು ಬಿಟ್ಟರೆ ಸಾರಾ ಅವರ 'ಚಂದ್ರಗಿರಿಯ ತೀರದಲ್ಲಿ' ಮತ್ತು 'ಬ್ಯಾರಿ' ಕತೆಯಲ್ಲಿ ಹೆಚ್ಚಿನ ವ್ಯತ್ಯಾಸವೇ ಇಲ್ಲ. ಈಗ ಕೃತಿಚೌರ್ಯದ ವಿವಾದ ಕೋರ್ಟ್ ಮೆಟ್ಟಿಲೇರಿದೆ. ಇತಿಹಾಸ ನಿರ್ಮಿಸುವಂತಹ ಕೃತಿಯೊಂದನ್ನು ಕನ್ನಡ ಜನತೆಗೆ ನೀಡಿದ ಸಾರಾರವರಿಗೆ ಸಿಗಬೇಕಾದ ಮನ್ನಣೆ, ಗೌರವ ನೀಡುವುದರಿಂದ ನಿರ್ಮಾಪಕರು ಮತ್ತು ಚಿತ್ರ ತಂಡದವರ ಗೌರವ ಹೆಚ್ಚಾಗುವುದೇ ಹೊರತು ಕುಂದುವುದಿಲ್ಲ. ಒಟ್ಟು ಕನ್ನಡ ಜನಮಾನಸದಲ್ಲಿ ಸಂಚಲನ ಮೂಡಿಸಿದ ಲೇಖಕಿಯ ಕೃತಿಗೆ ಸಲ್ಲಬೇಕಾದ ಮನ್ನಣೆ ಸಲ್ಲಿಸುವುದೆಂದರೆ ತಮ್ಮ ಗೌರವವನ್ನೇ ಹೆಚ್ಚಿಸಿಕೊಂಡಂತೆ. ಹೆಣ್ಣಿನ ಪ್ರತಿರೋಧದ ದನಿಯನ್ನು ಗೌರವಿಸಿದಂತೆ. ಅಂತಹ ಪ್ರಯತ್ನ ನಡೆಯಲಿ ಎಂದು ಆಶಿಸೋಣ.

❑

**ಗೆಳತಿಯರೇ, ಬೆಂಬಲಿಗರೇ**

**ಈ ಸಂಚಿಕೆಯನ್ನು ಹೊರತರುವಲ್ಲಿ ನಮ್ಮೊಟ್ಟಿಗೆ ಕೈಜೋಡಿಸಿರುವ ಪದ್ಮ ಎಚ್.ಎಸ್., ಬಿ.ಎಂ. ರೋಹಿಣಿ, ಮಾನಸ ಬಳಗದವರಿಗೆ ಹಾಗೂ ಲೇಖನ, ಪತ್ರಗಳ ಮೂಲಕವೂ ನಮ್ಮ ಉತ್ಸಾಹವನ್ನು ಇಂಗದಂತೆ ನೋಡಿಕೊಳ್ಳುತ್ತಿರುವ ನಿಮ್ಮೆಲ್ಲರಿಗೂ ನಾವು ಸದಾ ಋಣಿ.**



# ದುಡಿಮೆಯೇ ದೌರ್ಬಲ್ಯವಾಗಲು ಬಿಡಬೇಡಿ!

■ ರೀಟಾ ರೀನಿ

ಒಂದು ಸಂಸ್ಥೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಕೆಲಸ ಮಾಡುತ್ತಿದ್ದ ಸುಮಾ (ಹೆಸರು ಬದಲಾಗಿದೆ)ಗೆ ಒಂದು ದಿನ ಇದ್ದಕ್ಕಿದ್ದಂತೆ ಆಕೆಗೆ ತನ್ನ ಗುತ್ತಿಗೆ ಮುಗಿಯಿತು, ತಾನಿನ್ನು ಕೆಲಸ ಬಿಡಬೇಕಾಗುತ್ತದೆ ಎಂಬ ಸುದ್ದಿ ತಲುಪಿತು. ಅವಳು ತನ್ನ ಬಾಸ್ ಬಳಿ ಹೋಗಿ, 'ಸಾರ್, ಮನೆಯಲ್ಲಿ ತುಂಬಾ ಕಷ್ಟ. ನನ್ನ ಗಂಡ ಕುಡುಕ. ನನ್ನ ಚಿತ್ರಹಿಂಸೆ ಮಾಡ್ತಿದ್ದ. ಅವನನ್ನ ಬಿಟ್ಟು ನನ್ನ ಮಗಳು ಮತ್ತು ನಾನು ನನ್ನ ಅಮ್ಮನ ಮನೆಯಲ್ಲಿ ಇದ್ದೀವಿ. ದಯವಿಟ್ಟು ನನ್ನ ಗುತ್ತಿಗೆ ಅವಧಿ ವಿಸ್ತರಿಸಿ ಸಾರ್' ಅಂತ ಕೇಳಿಕೊಂಡಳು. ಆತ ಆ ಕ್ಷಣಕ್ಕೆ ಏನೂ ಮಾತಾಡಲಿಲ್ಲ. 'ನೋಡೋಣ' ಎಂದಷ್ಟೇ ಹೇಳಿ ಕಳುಹಿಸಿದ್ದ.

ಎರಡು ದಿನಗಳ ನಂತರ ಅವಳನ್ನು ಕ್ಯಾಬಿನ್‌ಗೆ ಕರೆಸಿದ. 'ನೋಡು, ನಾನು ಕಾಂಟ್ರಾಕ್ಟ್ ರಿನ್ಯೂ ಮಾಡೋಕೆ ಸಾಧ್ಯ ಇಲ್ಲ. ಆದರೆ ಪಾಪ, ನಿನ್ನ ಅವಸ್ಥೆ ಕೇಳಿ ನಿನಗಾಗಿ ಒಂದು ಪೋಸ್ಟ್ ಕ್ರಿಯೇಟ್ ಮಾಡಿದ್ದೇನೆ. ನಮ್ಮ ಸ್ಟೆನೋಗ್ರಾಫರ್ ನನ್ನ ಎಲ್ಲಾ ಕೆಲಸ ನೋಡಿಕೊಳ್ತಿದ್ದಾರೆ. ಅವರಿಗೆ ಅದು ಹೊರೆಯಾಗುತ್ತೆ. ನೀನು ನನ್ನ ಪರ್ಸನಲ್ ಅಸಿಸ್ಟೆಂಟ್ ಆಗಿ ಕೆಲಸ ಮಾಡ್ತಿಯಾ?' ಅಂತ ಕೇಳಿದ. ಸುಮಾಳಿಗೆ ಹೋದ ಜೀವ ಮರಳಿ ಬಂದಂತಾಯಿತು. ಸದ್ಯ ನನ್ನನ್ನೂ ನನ್ನ ಮಗೂನೂ ಕಾಪಾಡಿದೆಯಲ್ಲಾ ಅಂತ ದೇವರಿಗೆ ನಮಸ್ಕಾರ ಮಾಡಿದಳು.

ವಾಸ್ತವದಲ್ಲಿ ಅವಳಿಗೆ ಆಫೀಸಿನಲ್ಲಿ ಮಾಡಲು ಅಂಥಾ ಏನೂ ಕೆಲಸಗಳೇ ಇರಲಿಲ್ಲ. ಬೆಳಿಗ್ಗೆ ಬಂದವಳು ಅಟೆಂಡರ್ ಇದ್ದರೂ ತಾನೇ ತನ್ನ ಬಾಸ್ ಟೇಬಲ್ ಕ್ಲೀನ್ ಮಾಡುವುದು, ಫೋನ್ ಒರೆಸಿ ಇಡುವುದು ಇತ್ಯಾದಿ ಮಾಡುತ್ತಿದ್ದಳು. ಒಂದು ತಿಂಗಳು ಕಳೆದಿರಬೇಕು. 'ನನಗೆ ಬೆಳಗಾವಿಯಲ್ಲಿ ಅರ್ಜೆಂಟ್ ಮೀಟಿಂಗ್ ಇದೆ ಹೋಗಬೇಕು. ಎರಡು ದಿನದ್ದು. ನನ್ನ ಫೈಲ್‌ಗಳನ್ನು ಜೋಡಿಸಿಕೊಂಡು ಹೊರಡು' ಎಂದು ಆದೇಶಿಸಿ ಒಂದಷ್ಟು ಫೈಲ್‌ಗಳನ್ನು ಅವಳತ್ತ ಹಾಕಿದ. ಪರ್ಸನಲ್ ಅಸಿಸ್ಟೆಂಟ್ ಆಗಿದ್ದರಿಂದ ವಿಧಿಯಿಲ್ಲದೆ ಅವಳು ಹೊರಟಳು. ಅವನು ಸೀದಾ ಮೈಸೂರಿಗೆ ಕರೆದೊಯ್ದ. "ನಿನಗೆ ಹೇಗೂ ಗಂಡ ಇಲ್ಲ, ನನ್ನ ಹೆಂಡತಿ ಗಟಾಣಿ, ನಿನಗೂ ಕೆಲಸ ಬೇಕು. ಅಡ್ಜಸ್ಟ್ ಮಾಡ್ಕೋ. ಸುಮ್ನೆ ರಂಪ ಮಾಡಿದ್ರೆ ನಿನ್ನ ಮೇಲೆ ಆರೋಪ ಹೊರಿಸೋದು ಕಷ್ಟ ಅಲ' ಅಂತ ಹೇಳಿದ. ಇಷ್ಟು ನೇರವಾದ ದಾಳಿಯಿಂದ ಸುಮಾ ತತ್ತರಿಸಿದಳು. ಆದರೆ ಏನೂ ಮಾಡುವ ಸ್ಥಿತಿಯಲ್ಲಿ ಇರಲಿಲ್ಲ. ಒಪ್ಪಿಕೊಂಡಳು. ಲಾಡ್ಜ್ ಆಯಿತು, ವಿಹಾರ ಧಾಮವಾಯಿತು, ಕೊನೆಗೆ ಆಫೀಸಿನಲ್ಲೂ...

* * *

ಸರ್ಕಾರದ ಅನುದಾನಿತ ಶಾಲೆಯಲ್ಲಿ ಆಕೆ ಟೀಚರ್. 'ಎರಡು ಕಿಡ್ನಿ 75 ಪರ್ಸೆಂಟ್ ಫೇಲ್ ಆಗಿದೆ' ಎಂದು ಬಂದ ಡಾಕ್ಟರ್ ರಿಪೋರ್ಟ್ ಅವಳನ್ನು ಅಧೀರಗೊಳಿಸಿತು. ಗಂಡನ ಸಂಪಾದನೆಯನ್ನಷ್ಟೇ ನೆಚ್ಚಿಕೊಂಡರೆ ಹೊಟ್ಟೆಗೆ ತಣ್ಣೀರು ಬಟ್ಟೆ ಇನ್ನು ವೈದ್ಯಕೀಯ ಖರ್ಚಿಗೆ ದೇವರೇ ಗತಿ ಎಂಬಂಥ ಸ್ಥಿತಿ. ವಾರದಲ್ಲಿ ಎರಡು ದಿನ ಟ್ರೀಟ್‌ಮೆಂಟ್‌ಗೆ ಹೋಗಬೇಕು. ಇಷ್ಟು ಅಡ್ಜಸ್ಟ್ ಮಾಡಿಕೊಂಡರೆ ಒಂದು ವರ್ಷದಲ್ಲಿ ಆಕೆ ಗುಣಮುಖಳಾಗುತ್ತಾಳೆ. 'ಅದಕ್ಕಾಗಿ ಒಬ್ಬ ಶಿಕ್ಷಕಿಯನ್ನು ನನ್ನ ದುಡ್ಡಿನಲ್ಲೇ ಇಡುತ್ತೇನೆ, ನನಗೆ ಸಾಧ್ಯವಾದಾಗಲೆಲ್ಲಾ ನಾನೇ ಕೆಲಸ ಮಾಡುತ್ತೇನೆ' ಎಂದು ಅಂಗಲಾಚಿದರೂ ಶಾಲೆಯ ವ್ಯವಸ್ಥಾಪಕರು ಸುತಾರಾಂ ಒಪ್ಪುವುದಿಲ್ಲ. ದೈಹಿಕ ಕಾಯಿಲೆಯ ಜೊತೆಗೆ ಮಾನಸಿಕ ಒತ್ತಡ ತೀವ್ರವಾಗಿ ಆಕೆಯ ಕಾಯಿಲೆ ಉಲ್ಬಣಿಸಿತು. ಕೊನೆಗೊಂದು ದಿನ ಕೆಲಸಕ್ಕೆ ರಾಜೀನಾಮೆ ಕೊಟ್ಟು ಅತ್ಯಂತ ದಯನೀಯ ಸ್ಥಿತಿಯಲ್ಲಿ ದಿನಗಳನ್ನು ದೂಡಬೇಕಾಯಿತು. ನಿರ್ದಯಿ ವ್ಯವಸ್ಥಾಪಕನಿಂದಾಗಿ ಸರ್ಕಾರಿ ಕೆಲಸ ಕಳೆದುಕೊಂಡು ಈಗ ಒಂದು ಪುಟ್ಟ ಖಾಸಗಿ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದಾಳೆ.

* * *

ಮಹಿಳೆಯರ ಸಮಾನತೆಗಾಗಿ ಮಾಡುವ ಹಲವು ಹೋರಾಟಗಳು ಇಂಥಾ ಸಾವಿರಾರು ಅಸಹಾಯಕ ಹೆಣ್ಣು ಮಕ್ಕಳ ಪರಿಸ್ಥಿತಿಯನ್ನು ಲೇವಡಿ ಮಾಡಿದಂತೆ ಭಾಸವಾಗುತ್ತದೆ. ನಾನು ಪುರುಷನಿಗಿಂತ ಕಡಿಮೆ ಇಲ್ಲ ಎಂದು ತಮ್ಮ ಬದುಕಿನ ದಾರಿಯನ್ನು ದುಡಿಮೆಯಲ್ಲಿ, ಆರ್ಥಿಕ ಸ್ಥಿರತೆ ಸಾಧಿಸುವುದರಲ್ಲಿ ಕಂಡುಕೊಳ್ಳಲು ಹೊರಟವರು ಇದ್ದಾರೆ.

ಆದರೂ ಹೆಣ್ಣೆಂಬ ಕಾರಣಕ್ಕೆ ಒಬ್ಬ ದುಡಿಯುವ ಮಹಿಳೆಯ ಸಮಸ್ಯೆಗಳು ವಿಶಿಷ್ಟವಾದವು. ಹತ್ತಾರು ಕೆಲಸಗಳನ್ನು ನಿಭಾಯಿಸುವ ಸಾಮರ್ಥ್ಯ ಇದೆ ಎಂಬ ಕಾರಣಕ್ಕೋ ಅಥವಾ ನಿಭಾಯಿಸಲೇಬೇಕು ಎಂಬ ನಿರೀಕ್ಷೆಗೋ ಒಟ್ಟಿನಲ್ಲಿ ದುಡಿಯುವ ಮಹಿಳೆಯ ಒತ್ತಡಗಳು ದಿನದಿಂದ ದಿನಕ್ಕೆ ಹೆಚ್ಚುತ್ತಿವೆ.

ಪುರುಷರಷ್ಟು ಹೆಂಗಸರು ಸಮರ್ಥರಲ್ಲ ಎಂಬುದು ಪುರಾತನ ನಂಬಿಕೆ. ಕೆಲವು ಉದ್ಯೋಗಗಳಿಗೆ ಅವರು ಅನರ್ಹರು ಎಂದು ಮಾಡಿಕೊಂಡು ಬಂದಿರುವ ಹಲವು ಶಾಸನಗಳನ್ನು ಮುರಿದು ಹೆಣ್ಣು ಮಕ್ಕಳು ಸರಿ ಸುಮಾರು ಎಲ್ಲಾ ಕ್ಷೇತ್ರಗಳಲ್ಲೂ ಸಾಧನೆ ಮೆರೆದಿದ್ದಾರೆ. ಆದರೂ ಶತಮಾನಗಳಿಂದ ಬೇರುಬಿಟ್ಟಿರುವ ಈ ತಾರತಮ್ಯದ ಮನೋಭಾವವನ್ನು ಅಳಿಸಿಹಾಕಲು ಸಾಧ್ಯವಾಗಿಲ್ಲ. ಒಬ್ಬ ಗಂಡಸಿಗೆ ಹೋಲಿಸಿದರೆ ಹೆಣ್ಣು ಮಗಳೊಬ್ಬಳು ನಿಭಾಯಿಸಬೇಕಾದ ಕಾರ್ಯಕ್ಷೇತ್ರ ಬಹಳ ವಿಸ್ತಾರವಾದುದು. ಮನೆ, ಮಕ್ಕಳು, ಆಫೀಸು, ವ್ಯವಹಾರ..... ಇತ್ಯಾದಿ ಇತ್ಯಾದಿ. ವಿಶ್ವದ ಉಳಿದ ದೇಶಗಳ ಹೆಂಗಸರಿಗೆ ಹೋಲಿಸಿದರೆ ಭಾರತದ ಮಹಿಳೆಯರ ಸವಾಲುಗಳು ಇನ್ನೂ ಭಿನ್ನವಾಗಿದೆ. ಇಲ್ಲಿ ಪುರುಷಾಧಿಕಾರ ಎಷ್ಟು ತೀವ್ರವಾಗಿದೆ ಎಂದರೆ ಮನೆಗೆಲಸದಲ್ಲಿ ಒಂದಷ್ಟು ಭಾಗಿಯಾಗುವುದು ಅವಮಾನ ಎಂದೇ ಬಹುಪಾಲು ಗಂಡಸರು ಭಾವಿಸುತ್ತಾರೆ. ಅಡಿಗೆ ಮಾಡು, ಮನೆ ಶುಚಿಮಾಡು, ಪಾತ್ರೆ ತೊಳಿ, ಬಟ್ಟೆ ಒಗಿ, ಮಕ್ಕಳನ್ನು ಶಾಲೆಗೆ ರೆಡಿ ಮಾಡು ಮುಂತಾದ ಎಲ್ಲಾ ಕೆಲಸಗಳನ್ನು ಹೆಂಗಸೊಬ್ಬಳೇ ನಿಭಾಯಿಸಬೇಕು. ಬರೀ ಗೃಹಿಣಿ ಯಾಗಿದ್ದವರೆಗೆ ಇಷ್ಟನ್ನು ನಿಭಾಯಿಸುವುದು ಸಮಸ್ಯೆಯಾಗಿರಲಿಲ್ಲ. ಆದರೆ ದುಡಿಮೆಗೆ ನಿಂತ ಮಹಿಳೆಯು ಎಲ್ಲವನ್ನು ತಾನೊಬ್ಬಳೇ ನಿಭಾಯಿಸಬೇಕಿರುವುದು ಆಕೆಯ ದೈಹಿಕ ಮತ್ತು ಮಾನಸಿಕ ಆರೋಗ್ಯದ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತಿರುವುದನ್ನು ನಾವು ಗಮನಿಸುತ್ತಲೇ ಇಲ್ಲ.

ಈ ಒತ್ತಡಗಳಿಂದಾಗಿ ಹೆಂಗಸರು ನಿದ್ದೆ ಮಾಡುವ ಅವಧಿ ಕಡಿಮೆ ಆಗುತ್ತಿದೆ. ಬೆಳಿಗ್ಗೆ ಬೇಗ ಏಳುವುದು, ರಾತ್ರಿ ತಡವಾಗಿ ಮಲಗುವುದರಿಂದ ಒಬ್ಬ ಮಹಿಳೆಗೆ ದಿನಕ್ಕೆ ಎರಡು ಗಂಟೆಗಳ ನಿದ್ದೆ ಖೋತಾ ಆಗುತ್ತಿದೆ. ಅಂದರೆ ವಾರಕ್ಕೆ 14 ಗಂಟೆಗಳ ನಿದ್ದೆ ಲಾಸ್. ಆಫೀಸಿನಲ್ಲಿ ಕೆಲಸದ ಒತ್ತಡ ಹೆಚ್ಚಾಗಿ ಅದನ್ನು ಪೂರೈಸಲು ಮನೆಗೆ ತಂದರೆ ಇನ್ನಷ್ಟು ನಿದ್ದೆ ಕಡಿತ. ಸರಿಯಾದ ವಿಶ್ರಾಂತಿ ಇಲ್ಲದ ದೇಹ ಮತ್ತು ಮನಸ್ಸುಗಳು ಎಷ್ಟು ಸಶಕ್ತವಾಗಿರಬಲ್ಲವು ಎಂಬುದನ್ನು ನಾವು ಲೆಕ್ಕ ಹಾಕಬಹುದು. ಇವತ್ತು ಹೆಂಗಸರಿಗೆ ಸಂಬಂಧಿಸಿದ ಕಾಯಿಲೆಗಳು ಹೆಚ್ಚಾಗುತ್ತಿರುವುದಕ್ಕೂ ಈ ಅಂಶ ಪ್ರಮುಖ ಕಾರಣವಾಗಿದೆ.

ಮಾನಸಿಕ ಒತ್ತಡಕ್ಕೆ ಇನ್ನೊಂದು ಪ್ರಮುಖವಾದ ಕಾರಣವೂ ಇದೆ. ಅದೇ ಲೈಂಗಿಕ ಶೋಷಣೆ. ಯಾವುದೇ ಹುದ್ದೆಯಲ್ಲಿರಲಿ, ದುಡಿಯುವ ಹೆಣ್ಣು ಮಕ್ಕಳು ಒಂದಲ್ಲಾ ಒಂದು ರೀತಿಯ ಲೈಂಗಿಕ ಶೋಷಣೆಗೆ ಒಳಪಡುತ್ತಾರೆ. ಹೆಣ್ಣು ಮಕ್ಕಳೊಂದಿಗೆ ಪುರುಷರ ಕಣ್ಸನ್ನೆಯ ವರ್ತನೆಯಿಂದ ಹಿಡಿದು ಅವರನ್ನು ದೈಹಿಕವಾಗಿ ಸಂಭೋಗಿಸುವ ಮಟ್ಟದವರೆಗೆ ವಿವಿಧ ಹಂತದ ಶೋಷಣೆಯ ಮಾದರಿಗಳನ್ನು ಗುರುತಿಸಬಹುದು. ಛೇಂಬರ್‌ಗೆ ಬರುವ ಹೆಣ್ಣು ಮಗಳನ್ನು ಹಸಿವಿನಿಂದ ಗುರಾಯಿಸಿ ಕಸಿವಿಸಿಗೆ ಒಳಪಡಿಸುವುದು, ಅಶ್ಲೀಲವಾದ ಜೋಕ್‌ಗಳನ್ನು ಹೇಳುವುದು, ಸಿನಿಮಾಗಳಿಗೆ ಆಹ್ವಾನಿಸುವುದು, ಫೈಲ್ ಕೊಡುವಾಗ ಕೈ ತಾಕಿಸಿಯೇ ಮಾತಾಡುವುದು, ಹಣ್ಣು ನೋಡಿದಂತೆ ಜೊಲ್ಲು ಸುರಿದ ತುಟಿ ಸವರಿಕೊಳ್ಳುವುದು ಮುಂತಾದ ವರ್ತನೆ ಅಸಹನೀಯ



ವಾಗಿರುತ್ತದೆ. ಆದರೆ ಯಾಕೆ ಹಾಗೆ ಮಾಡುತ್ತೀ ಎಂದಾಗಲೀ, ಹಾಗೆ ಮಾಡಬೇಡ ಎಂದು ಪ್ರತಿಭಟಿಸುವುದಕ್ಕಾಗಲಿ ಅವಕಾಶವೇ ಇಲ್ಲದಂತೆ ಸದಾ ಸಂಕೋಚದಲ್ಲಿ ಮತ್ತು ಭಯದಲ್ಲಿ ಇರಬೇಕಾದ ಪರಿಸ್ಥಿತಿ ಏರ್ಪಟ್ಟಿರುತ್ತದೆ. ಇದನ್ನು ನಿರ್ಲಕ್ಷಿಸಿ ತನ್ನ ಸಾಮರ್ಥ್ಯದಿಂದಲೇ ಮೇಲ್ಮೆಯನ್ನು ಸಾಧಿಸಿದರೆ 'ಓ ಬಾಸ್ ಜೊತೆ ಏನೋ ಇದೆ' ಎಂಬ ಸಹೋದ್ಯೋಗಿಗಳ ಗುಸುಗುಸು ಆಕೆಯ ಚಾರಿತ್ರ್ಯ ವಧೆಯಲ್ಲಿ ಅಂತ್ಯವಾಗುತ್ತದೆ.

ಇದರ ಮುಂದುವರಿದ ಭಾಗವಾಗಿ ಇವತ್ತಿನ ಹೆಣ್ಣು ಮಕ್ಕಳಿಗೆ ಚಾರಿತ್ರ್ಯ ಹರಣದ ಬಹುದೊಡ್ಡ ಭಯ ಕಾಡುತ್ತಿರುವುದು ಮಾಧ್ಯಮಗಳ ಮೂಲಕ. ಹಲವು ಮಾಧ್ಯಮಗಳು ವೈಯಕ್ತಿಕ ವಿಚಾರಗಳನ್ನು ಬಹಳ ರಂಜನೀಯವಾಗಿ ಪ್ರಕಟಿಸುತ್ತವೆ. 'ಒಬ್ಬ ವ್ಯಕ್ತಿಯ ವೈಯಕ್ತಿಕ ವಿಚಾರವು ಸಾಮಾಜಿಕವಾಗಿ ದುಷ್ಪರಿಣಾಮ ಬೀರುವಂತಿದ್ದರೆ ಮಾತ್ರ ಅವುಗಳನ್ನು ಸುದ್ದಿ ಮಾಡಬಹುದು' ಎಂಬ ಕಾನೂನು ಇದೆ. ಆದರೆ ಇವತ್ತು ಪ್ರತಿಯೊಬ್ಬ ಹೆಣ್ಣು ಮಗಳೂ ಸುದ್ದಿಯ ವಸ್ತುವಾಗುತ್ತಿರುವುದನ್ನು ನೋಡಿದರೆ ಇಡೀ ಹೆಣ್ಣು ಕುಲವನ್ನು ಭಯದ ವಾತಾವರಣದಲ್ಲಿ ಇಡುವ ಹುನ್ನಾರ ಇದೆಯೇನೋ ಅನಿಸುತ್ತದೆ. ದುಡಿಯುವ ಕಡೆ, ಮನೆಯಲ್ಲಿ ಅವಮಾನ ಅನುಭವಿಸಬೇಕಾದ ಭಯದಿಂದ ಅಸಹಾಯಕವಾಗಿ ನರಳುತ್ತಿರುವ ನೂರಾರು ಹೆಣ್ಣು ಮಕ್ಕಳಿದ್ದಾರೆ. ಮಾಧ್ಯಮಗಳ ಈ ಮಾದರಿಯನ್ನು ಅನುಸರಿಸಿ ಸಹೋದ್ಯೋಗಿಗಳೇ ಒಂದು ರೀತಿಯ ಬ್ಲಾಕ್ ಮೇಲ್ ತಂತ್ರಗಳನ್ನು ಬಳಸುವ ಪ್ರಸಂಗಗಳು ಇವೆ. ಅತಿಯಾದ ಭದ್ರತೆಯ ಫೀಲಿಂಗ್ ಕೊಟ್ಟು ನಿಧಾನವಾಗಿ 'ಅವರು ನಿನ್ನ ಬಗ್ಗೆ ಹೀಗೆ ಹೇಳಿದರು, ನಾನು ಡಿಫೆಂಡ್ ಮಾಡಿದೆ' ಎಂಬಲ್ಲಿಂದ ಪ್ರಾರಂಭವಾಗಿ, 'ನನ್ನನ್ನು ಬಿಟ್ಟರೆ ನಿನ್ನನ್ನು ಇಷ್ಟಪಡುವವರು ಯಾರೂ ಇಲ್ಲ' ಎಂಬ ಹಂತಕ್ಕೆ ತಂದು ಲೈಂಗಿಕ ನಿರೀಕ್ಷೆಯಲ್ಲಿ ಅಂತ್ಯಗೊಳಿಸಿರುವ ಉದಾಹರಣೆಗಳೂ ಇವೆ.

ದುಡಿಯುವ ಹೆಣ್ಣು ಮಕ್ಕಳಿಗೆ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾದ ಹೊಸ ಹೊಸ ಬಗೆಯ ಸವಾಲುಗಳು ಎದುರಾಗುತ್ತಿವೆ. ಈ ಸವಾಲುಗಳು ವ್ಯಕ್ತಿಯ ಮಾನಸಿಕ ದೃಢತೆ, ಸ್ಥಳ, ಹುದ್ದೆ, ಉದ್ಯೋಗ ಇತ್ಯಾದಿ ಹಲವು ಅಂಶಗಳನ್ನು ಒಳಗೊಂಡಿದ್ದು ಒಬ್ಬೊಬ್ಬರದ್ದು ಒಂದೊಂದು ವಿಶಿಷ್ಟ ಬಗೆಯ ಅನುಭವಗಳಾಗಿರುತ್ತವೆ. ಹಾಗಾಗಿಯೇ ಹೆಣ್ಣುಮಕ್ಕಳು ತಮಗೆ ಸಂಬಂಧಿಸಿದ ಒಂದು ಜೆನರಲ್ ಪಾಲಿಟಿಕ್ಸ್ ಮತ್ತು ಪರ್ಸನಲ್ ಪಾಲಿಟಿಕ್ಸ್ ರೂಢಿಸಿಕೊಳ್ಳಬೇಕು. ಹೆಣ್ಣುಮಕ್ಕಳ ದುಡಿತವನ್ನೇ ದೌರ್ಬಲ್ಯವಾಗಿ ಪರಿವರ್ತಿಸುವ ಹುನ್ನಾರವನ್ನು ನಾವು ಸೂಕ್ಷ್ಮವಾಗಿ ಗಮನಿಸಿ ಅಂಥಾ ಮನೋಭಾವವನ್ನು ದಿಟ್ಟವಾಗಿ ಧಿಕ್ಕರಿಸುವ ದೃಢತೆ ಮತ್ತು ಮಾನಸಿಕ ಸಾಮರ್ಥ್ಯವನ್ನು ಬೆಳೆಸಿಕೊಳ್ಳುವುದು ದುಡಿಯುವ ಹೆಣ್ಣುಮಕ್ಕಳ ತಕ್ಷಣದ ಅಗತ್ಯವಾಗಿದೆ. ❑

# ಬೊಗಸೆಯಲ್ಲಿಯ ಬದುಕು

1

ಹೆಣ್ಣಿಗೆ ಕಣ್ಣೇ
ಸಕಲ ಜಗತ್ತು,
ಜೋಡಿಸುತ್ತವೆ ಕಣ್ಣು
ಬ್ರಹ್ಮಾಂಡ ಜೀವ ಜಗತ್ತು;

ಕಣ್ಣು ತುಂಬಿಸುವಾಗಸದಲ್ಲಿ
ಚುಕ್ಕಿ, ಸೂರ್ಯಚಂದ್ರರು,
ಕಾಮನಬಿಲ್ಲು, ಪಕ್ಷಿಯ ಸೊಲ್ಲು
ಏನೆಲ್ಲ ಚೆಂದ ಚಿತ್ತಾರವಿದ್ದರದಾ
ಮರೆಯಲಾರಳು ಗುಬ್ಬಚ್ಚಿಯ
ಚುಂಚಲ್ಲಿಯ ಹುಲ್ಲುಕಡ್ಡಿ
ಯಾತ್ಮದೊಳಗೆ ಮಿಡಿವ ಮಮತೆಯ !
"ಇದುವೆ ನನ್ನ ನೆಲಮುಗಿಲು
ಸಾಕು ನನ್ನ ಮನೆಬಾಗಿಲು!"
ಎನ್ನುವಳು.

2

ಹೆಣ್ಣಿಗೆ ಕಣ್ಣೇ
ಸೌಂದರ್ಯ ಸಂಪತ್ತು
ತೋರುತ್ತವೆ ಕಣ್ಣು
ಬಾಳ ಮಾಯೆ!
ಕಣ್ಣು ಕೋರೈಸುವ ಕಾಡುಮೇಡು,
ಎಷ್ಟು ಸಲ ಹೆತ್ತರೂ
ಕಾಪಿಟ್ಟುಕೊಳ್ಳುತ್ತ ಬೀಜ
ಒಂದಕ್ಕೆ ಸಹಸ್ರ ಬೀಜ
ನೀಡುವ ಒಡಲಾಗಿ
ಮತ್ತೆ ಮತ್ತೆ ಗರ್ಭ
ಧರಿಸುವ ಧರಿತ್ರಿಗಾಗಿ
ಅಸೂಯೆಪಟ್ಟರೂ ಹೆಣ್ಣು
ಮರೆಯಲಾರಳು ಕಂದನ
ತನ್ನ ಗರ್ಭದಾನಂದನ
"ನನ್ನೊಳಗಿದೆ ಬಾಳನಂದನ
ನಾನೇ ವಸುಂಧರೆಯಂದ
ಸಾಕು ನನಗೊಬ್ಬ ಕಂದ"
ಎನ್ನುವಳು

3

ಹೆಣ್ಣಿಗೆ ಕಣ್ಣೇ
ಮಾರ್ಗದರ್ಶಕ ಗುರು, ಗುರಿ,
ಕಂಡುಕೊಳ್ಳುತ್ತಾಳೆ
ಬಾಳ ಸತ್ಯಗಳ;
ಕಣ್ಣು ಕಿಟಕಿಗಳಿಂದಾಚೆ
ನಿತ್ಯ ದರ್ಶಿಸುವ ನೆಲ, ಜಲ
ಮುಗಿಲಿನಾತ್ಮ ತತ್ವಗಳು
ಎಷ್ಟು ಅರ್ಥ, ಪರಮಾರ್ಥ ನೀಡಿದರೂ
ಬಯಸದಿರಲಾರಳು ಬವಣೆ
ತುಂಬಿದ ಹೆಣ್ಣು ಬಾಳ
ಬೇಗುದಿಗಳನ್ನು,
"ಇರಲಿ ಇರಲೆನಗೆ
ಬೊಗಸೆಯಲ್ಲಿಯ ಈ ಹೆಣ್ಣು ಬದುಕು"
ಎನ್ನುವಳು.

■ ಮಾಲತಿಪಟ್ಟಣ ಶೆಟ್ಟಿ





# ಆ್ಯಸಿಡ್ ದಾಳಿ; ಭದ್ರತೆಗೊಂದು ಸವಾಲು

■ ದಿಶಾ ಕೆ.ಆರ್.

ಎಲ್ಲೆಡೆ ಕೇಳಿ ಬರುತ್ತಿರುವ ಸ್ತ್ರೀಸಬಲೀಕರಣದ ಹೊಸ ಅಲೆಗಳು ಇಂಪಾಗಿ ಕೇಳಿಸಿದರೂ ಅದರ ಒಳಗಿನ ಸದ್ದು ಮಾತ್ರ – ನೋವು, ಆಕ್ರಂದನ, ಹಿಂಸೆ, ಭಯ ಹಾಗೂ ತಲ್ಲಣ.

'ನಮ್ಮ ಬದುಕಿನ ಭದ್ರತೆಗೆ ಮುಖ್ಯವಾದುದು– ಆರ್ಥಿಕ ಸ್ವಾತಂತ್ರ್ಯ' ಎಂಬ ಸಿದ್ಧಾಂತವನ್ನು ನಂಬಿರುವ ಈಗಿನ ಹೆಣ್ಣುಮಕ್ಕಳು ವಿದ್ಯಾವಂತರಾಗುತ್ತಿರುವರು, ಎಲ್ಲಾ ಕ್ಷೇತ್ರದಲ್ಲೂ ತಮ್ಮನ್ನು ತೊಡಗಿಸಿಕೊಳ್ಳುತ್ತಿರುವರು, ತಮ್ಮ ಭದ್ರತೆಗಾಗಿ ಆರ್ಥಿಕವಾಗಿ ಸ್ವಾತಂತ್ರ್ಯರಾಗುತ್ತಿರುವರು.

ಎಷ್ಟೋ ಹೆಣ್ಣುಮಕ್ಕಳು ವಿದ್ಯೆ ಇಲ್ಲದಿದ್ದರೂ ಕುಟುಂಬವನ್ನು ಸಾಕುವುದಕ್ಕಾಗಿಯೋ, ಗಂಡನ ಕಿರುಕುಳವನ್ನು ಸಹಿಸಲಾಗದೆ ಸ್ವಾತಂತ್ರಳಾಗುವುದಕ್ಕಾಗಿಯೋ, ಮಕ್ಕಳ ವಿದ್ಯಾಭ್ಯಾಸಕ್ಕಾಗಿಯೋ ಆರ್ಥಿಕವಾಗಿ ಸ್ವಾತಂತ್ರಳಾಗುತ್ತಿರುವಳು. ಆದರೆ ಇತ್ತೀಚೆಗೆ ಗೌರಮ್ಮ ಎಂಬುವವರ ಮೇಲೆ ನಡೆದ ಆಸ್ಯಡ್ ದಾಳಿ ಎಲ್ಲಾ ಹೆಣ್ಣುಮಕ್ಕಳ ಭದ್ರತೆಯ ನಂಬಿಕೆಗಳನ್ನು ಛಿದ್ರಗೊಳಿಸಿದೆ. ಗಂಡನ ಕಿರುಕುಳವನ್ನು ಸಹಿಸಲಾಗದೆ ಆತನಿಂದ ದೂರವಾಗಿ ಗಾರ್ಮೆಂಟ್ಸ್ ಒಂದರಲ್ಲಿ ಕೆಲಸ ಮಾಡುತ್ತ ತಮ್ಮ ದುಡಿಮೆಯಿಂದಲೆ ಬದುಕುತ್ತಿದ್ದ ಗೌರಮ್ಮನವರ ಮೇಲೆ ಆ್ಯಸಿಡ್ ಎರಚಿದ್ದು ಅವರ ಗಂಡನೇ ಹೊರತು ಬೇರಾರು ಅಲ್ಲ. ಅಂದು ಬೆಳಗೆ ಅವರು ಕೆಲಸ ಮಾಡುವ ಗಾರ್ಮೆಂಟ್ಸ್ ಬಳಿ ಬಂದ ಅವರ ಪತಿ ಅವರನ್ನು ಒಟ್ಟಿಗೆ ಬಾಳಲು ಒತ್ತಾಯಿಸಿದರು. ಅದನ್ನು ನಿರಾಕರಿಸಿದ ಗೌರಮ್ಮನವರ ಮೇಲೆ ತಕ್ಷಣ ಆಸ್ಯಿಡ್ ಎರಚಿ ಮಾಯವಾದ. ಅಲ್ಲಿ ನೆರೆದಿದ್ದವರು ಅವರನ್ನು ಆಸ್ಪತ್ರೆಗೆ ಸೇರಿಸಿದ್ದರಿಂದ ಅವರು ಪ್ರಾಣಾಪಾಯದಿಂದ ಪಾರಾಗಿದ್ದಾರೆ. ನಂತರ ಬಂದಿಸಲ್ಪಟ್ಟ ಅವರ ಪತಿಯು – ಅನೈತಿಕ ಸಂಬಂಧ ಹೊಂದಿದ್ದರಿಂದ ಆಕೆಗೆ ಬುದ್ಧಿಕಲಿಸುವ ಸಲುವಾಗಿಯೇ ಆ್ಯಸಿಡ್ ಹಾಕಿದೆ ಎಂದು ಹುಸಿಯಾಗಿ ಆರೋಪಿಸಿದ. ಆದರೆ ಗೌರಮ್ಮನವರಿಗೆ ಮಾತ್ರ ಎಂದಿಗೂ ಮಾಸಿಹೋಗದ ಗಾಯವನ್ನು ಬಳುವಳಿಯಾಗಿ ಅವರ ಪತಿಯೇ ನೀಡಿದ್ದಾನೆ. ಈ ದಾಳಿಯಿಂದ ಆತ ಗೌರಮ್ಮನಿಂದ ಆಕೆಯ ಮಾನಸಿಕ ನೆಮ್ಮದಿಯ ಜೊತೆಗೆ ಆಕೆಗಿದ್ದ ಆರ್ಥಿಕ ಸ್ವಾತಂತ್ರ್ಯವನ್ನು ಕಿತ್ತುಕೊಂಡ. ಗಂಡನ ಹಿಂಸೆ ತಾಳಲಾರದೆ, ಆತನ ಹಂಗಿನಲ್ಲಿ ಬದುಕಲು ಇಚ್ಛಿಸದೆ ತನ್ನ ದುಡಿಮೆಯನ್ನು ಕಂಡುಕೊಂಡಿದ್ದ ಗೌರಮ್ಮ ಇನ್ನಾರದೋ ಮೇಲೆ ಆವಲಂಬಿತರಾಗ ಬೇಕಾದ ಅನಿವಾರ್ಯತೆ ಏರ್ಪಟ್ಟಿದೆ. ಗೌರಮ್ಮನವರ ಮುಂದಿನ ಬದುಕು ಪ್ರಶ್ನೆಯಾಗಿಯೇ ಉಳಿದಿದೆ.

ಈ ಘಟನೆಯಿಂದ ಛಿದ್ರಗೊಂಡಿದ್ದು ಬರಿ ಗೌರಮ್ಮನವರ ಬದುಕಿನ ನಂಬಿಕೆ ಮಾತ್ರವಲ್ಲದೆ, ಆರ್ಥಿಕವಾಗಿ ಸ್ವಾತಂತ್ರರಾಗುತ್ತಿರುವ ಹಾಗೂ ಸ್ತ್ರೀಸಬಲೀಕರಣದತ್ತ ಹೊಸ ಹೆಜ್ಜೆಯನ್ನಿಡುತ್ತಿರುವ ದಿಟ್ಟ ಮಹಿಳೆಯರ ನಂಬಿಕೆಗಳೂ ಛಿದ್ರಗೊಂಡಿವೆ. ದೈಹಿಕ ನಿಯಂತ್ರಣಕ್ಕೊಳಗಾಗುವುದನ್ನು ಬಿಟ್ಟು ಮಾನಸಿಕವಾಗಿ ಗಟ್ಟಿಗೊಂಡು ದುಡಿಮೆಯತ್ತ ಮುಖ ಮಾಡುತ್ತಿರುವ ಮಹಿಳೆಯನ್ನು ಈ ಆ್ಯಸಿಡ್ ದಾಳಿ ಎಂಬ ಹೀನ ಕೃತ್ಯ ದೈಹಿಕವಾಗಿ, ಮಾನಸಿಕವಾಗಿ ಹಾಗೂ ಆರ್ಥಿಕವಾಗಿ ಶೋಷಿಸುತ್ತಿದೆ.

ಮೊನ್ನೆ ನಡೆದ ಈ ಭೀಕರ ಘಟನೆ ಬದುಕಿನ ಭದ್ರತೆಯನ್ನ ನೀಡುವುದಾಗಿ ನಂಬಿರುವ ಆರ್ಥಿಕ ಸ್ವಾತಂತ್ರ್ಯವನ್ನು ಮಾತ್ರವಲ್ಲದೆ ಇಡೀ ಮದುವೆಯ ವ್ಯವಸ್ಥೆಯನ್ನೇ ಪ್ರಶ್ನಿಸುತ್ತಿದೆ.

ಈಗ ಎಲ್ಲೆಡೆ ಹೆಚ್ಚುತ್ತಿರುವ ಲೈಂಗಿಕ ದೌರ್ಜನ್ಯ, ಮರ್ಯಾದಾ ಹತ್ಯೆ, ಆಸಿಡ್ ಧಾಳಿಯಂತಹ ಕ್ರೂರ ಕೃತ್ಯಗಳನ್ನು ತಡೆಗಟ್ಟಲು ಹಾಗೂ ಹೆಣ್ಣಿನ ಭದ್ರತೆಯನ್ನು ಸ್ಥಿರಗೊಳಿಸಲು ಇನ್ನೂ ಪ್ರಬಲವಾದ ಕಾನೂನನ್ನು ಜಾರಿಗೊಳಿಸಬೇಕಿದೆ.

ಮಹಿಳೆಯರಿಗೆ ಎಲ್ಲಿಯೂ ಭದ್ರತೆ ಇಲ್ಲದಿರುವ ಈ ಸಂದರ್ಭದಲ್ಲಿ ನಾವೆಲ್ಲರೂ ಒಟ್ಟಾಗಿ ಹೋರಾಡಲೇಬೇಕಾದ ಹಾಗೂ ಇಡುವ ಹೆಜ್ಜೆಯನ್ನು ಎಚ್ಚರಿಕೆಯಿಂದಿಡುವ ಅನಿವಾರ್ಯ ಸ್ಥಿತಿಯನ್ನು ತಲುಪಿರುವೆವು.

❑

ಸುಖದ ಬಣ್ಣ ನೋಡಲಿಲ್ಲ
ಕಣ್ಣಿಗೆ ಕಂಡದೆಲ್ಲಾ ದುಃಖದ ಕಪ್ಪು ಬಣ್ಣ
ಸಾವಿರಾರು ಬಣ್ಣದ ಜೊತೆಯಲಿ
ಹೊಡೆದಾಡಿ ಬರುವ ಬಣ್ಣ ಕಪ್ಪು

■ ನಿರ್ಮಲ ಕೆ.

# ಕೃಷಿಕೂಲಿಕಾರ ಮಹಿಳೆಯ

*"There is no chance for welfare of the world unless the condition of women is improved."*

***-Swamy vivekananda***

ಕೃಷಿಯ ಹೊರತಾಗಿ ನಮ್ಮ ಗ್ರಾಮೀಣ ಬದುಕಿಗೆ ಅಸ್ತಿತ್ವವಿಲ್ಲ. ಇಂದಿಗೂ ಗ್ರಾಮೀಣರು ತಮ್ಮ ಸ್ವಂತ ಭೂಮಿಯಲ್ಲಿ ಇಲ್ಲವೆ ಇತರರ ಭೂಮಿಯಲ್ಲಿ ದುಡಿಮೆ ಮಾಡುತ್ತಲೇ ಬದುಕನ್ನು ಕಟ್ಟಿಕೊಂಡಿದ್ದಾರೆ. ಭಾರತದ ಸಂದರ್ಭದಲ್ಲಿ ಕೃಷಿ ಹೆಚ್ಚು ಯಾಂತ್ರೀಕರಣಕ್ಕೆ ಒಳಗಾಗಿಲ್ಲ. ಬಿತ್ತನೆ, ನಾಟಿ, ಬೆಳೆಯ ಕೊಯ್ಲು, ಬೀಜರಕ್ಷಣೆ, ಹಸನುಗೊಳಿಸುವಿಕೆ ಮುಂತಾದ ಕೆಲಸಗಳು ಮಾನವ ಸಂಪನ್ಮೂಲವನ್ನು ಆಧರಿಸಿವೆ. ಈ ಎಲ್ಲ ಕೆಲಸಗಳಲ್ಲಿ ಮಹಿಳೆಯರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಬಹಳ ಹಿಂದಿನಿಂದಲೂ ಮಹಿಳೆ ಮಾಡುವ ಕೆಲಸಗಳನ್ನು ಅಂಚಿಗೆ ತಳ್ಳುತ್ತ ಬರಲಾಗಿದೆ. ಅವಳು ಮಾಡುವ ಕೆಲಸ ಕನಿಷ್ಠದ್ದು ಎಂದಾದ ಮೇಲೆ ಕೊಡುವ ಕೂಲಿ ಕೂಡ ಕಡಿಮೆಯಾಗಿರಬೇಕು ಎನ್ನುವುದಾಗಿ ಪಿತೃಪ್ರಧಾನ ವ್ಯವಸ್ಥೆ ತಾನೇ ನಿರ್ಧರಿಸಿಬಿಟ್ಟಿದೆ. ಹಾಗಾಗಿ, ಮಹಿಳೆಗೆ ಪುರುಷನಿಗಿಂತ ಕಡಿಮೆ ಕೂಲಿ ಕೊಡುವುದನ್ನು ವ್ಯವಸ್ಥಿತವಾಗಿ ಮುಂದುವರಿಸಿಕೊಂಡು ಬರಲಾಗುತ್ತಿದೆ.

ಕೃಷಿ ವಲಯದಲ್ಲಿ ಕೃಷಿಕೂಲಿಕಾರಳಾಗಿ ದುಡಿಯುತ್ತಿರುವ ಮಹಿಳೆಯರ ಸಮಸ್ಯೆ ಕೇವಲ ಆರ್ಥಿಕತೆಗೆ ಮಾತ್ರ ಸಂಬಂಧಿಸಿದ್ದಲ್ಲ. ಇಲ್ಲಿ ದುಡಿಯುವ ಪುರುಷರೂ ಕನಿಷ್ಠ ಕೂಲಿಗಿಂತ ಕಡಿಮೆ ಕೂಲಿಗೆ ದುಡಿಯುತ್ತಿದ್ದಾರೆ. ಊಳಿಗಮಾನ್ಯ ವ್ಯವಸ್ಥೆ ಮಾನವ ಸಂಪನ್ಮೂಲವನ್ನು ಬಳಸಿಕೊಂಡು ಅಧಿಕ ಲಾಭ ಪಡೆಯಲು ಬಯಸುತ್ತದೆ. ಸಾಧಾರಣವಾಗಿ ಕೃಷಿಕೂಲಿಕಾರರಾಗಿ ದುಡಿಯುವವರು ಕೆಳಜಾತಿ–ವರ್ಗಗಳಿಗೆ ಸೇರಿದವರು, ಅನಕ್ಷರಸ್ಥರು, ಆರ್ಥಿಕವಾಗಿ ದುರ್ಬಲರು. ಸುಮಾರು ಶೇ90ರಷ್ಟು ಕೃಷಿ ಕೂಲಿಕಾರರು ಭೂರಹಿತರು ಇಲ್ಲವೆ ತೀರ ಕಡಿಮೆ ಭೂಮಿ ಹೊಂದಿರುವವರು. ಇಂಥ ಕುಟುಂಬಗಳಲ್ಲಿ ಮಹಿಳೆಯರು ಕೃಷಿಕೂಲಿಗೆ ಹೋಗುವ ಅನಿವಾರ್ಯತೆ ಇರುತ್ತದೆ. ಭೂಮಾಲೀಕರು ಅವರ ಈ ಪರಿಸ್ಥಿತಿಯನ್ನು ತಮ್ಮ ಲಾಭಕ್ಕೆ ಬಳಸಿಕೊಳ್ಳುತ್ತ ಬಂದಿದ್ದಾರೆ. ಕಡಿಮೆ ಕೂಲಿ, ಲೈಂಗಿಕ ಶೋಷಣೆ, ಕೆಲಸದ ಅನಿಶ್ಚಿತತೆ, ದೈಹಿಕ ಹಿಂಸೆ, ಮುಂತಾಗಿ ಹಲವು ರೀತಿಯಿಂದ ಮಹಿಳೆಯರ ಶೋಷಣೆ ನಡೆಯುತ್ತಿದೆ.

ಕರ್ನಾಟಕ ಕರಾವಳಿ, ಮಲೆನಾಡು, ಬಯಲುಸೀಮೆಗಳನ್ನು ಒಳಗೊಂಡಿರುವುದರಿಂದ ವಿವಿಧ ಬೆಳೆಗಳನ್ನು ಬೆಳೆಯುತ್ತದೆ. ನೀರಾವರಿ ಭೂಮಿ, ಒಣಭೂಮಿ, ಮಳೆಯಾಧರಿತ ಭೂಮಿಗಳಲ್ಲಿ ಕೃಷಿ ಚಟುವಟಿಕೆಗಳು ನಡೆಯುವುದರಿಂದ ಆಯಾ ಪ್ರದೇಶದಲ್ಲಿ ಕೆಲಸ ಮಾಡುವ ಮಹಿಳೆಯರ ಸಮಸ್ಯೆಗಳಲ್ಲಿ ತುಸು ಭಿನ್ನತೆ ಇದ್ದಿರಬಹುದಾದರೂ ಕೆಲವು ಮೂಲಭೂತ ಸಮಸ್ಯೆಗಳು ಸಮಾನವಾಗಿರುತ್ತವೆ.

## ಕೆಲಸದ ಅನಿಶ್ಚಿತತೆ

ನೀರಾವರಿ ವ್ಯವಸ್ಥೆ ಇರುವ ಕಡೆ ಕೃಷಿ ಚಟುವಟಿಕೆಯ ಅವಧಿ ದೀರ್ಘವಾಗಿರುತ್ತದೆ. ವರ್ಷಕ್ಕೆ ಕನಿಷ್ಠ ಎರಡು ಬೆಳೆ ತೆಗೆಯುವುದರಿಂದ ಕೆಲಸದ ದಿನಗಳು ಹೆಚ್ಚಿರುತ್ತದೆ. ಮಳೆಯಾಧರಿತ ಕೃಷಿಯಲ್ಲಿ ವರ್ಷಕ್ಕೆ ಒಂದು ಬೆಳೆಯನ್ನು ಮಾತ್ರ ಬೆಳೆಯಲಾಗುತ್ತದೆ. ಈ ಪ್ರದೇಶದಲ್ಲಿ ವರ್ಷದ ಕೆಲವೇ ದಿನಗಳು ಕೆಲಸವಿರುತ್ತದೆ. ಒಮ್ಮೆ ಒಂದೆರಡು ವರ್ಷ ಮಳೆ ಬಾರದೆ ಬರ ಬಂದರೆ ಮಹಿಳೆ ಕೂಲಿ ದೊರೆಯದೆ ಪರಿತಪಿಸುವ ಸ್ಥಿತಿ ಉಂಟಾಗುತ್ತದೆ. ಎರಡು ರೀತಿಯ ಕೃಷಿಯಲ್ಲಿಯೂ ಮಹಿಳೆಗೆ ವರ್ಷ ಪೂರ್ತಿ ಕೆಲಸ ಮಾಡುವ ಅವಕಾಶ ಇರುವುದಿಲ್ಲ. ಹಾಗಾಗಿ, ಅವಳು ಕೃಷಿ ಕೂಲಿಯೊಂದನ್ನೇ ಅವಲಂಬಿಸಿ ಬದುಕಲು ಸಾಧ್ಯವಾಗುವುದಿಲ್ಲ. ಅಡಿಕೆ, ಕಾಫಿ, ಟೀ, ಕಬ್ಬು ಮುಂತಾದವು ವಾರ್ಷಿಕ ಬೆಳೆಗಳು. ಇವುಗಳಲ್ಲಿನ ಕೆಲಸವೂ ಸೀಮಿತ ಅವಧಿಗೆ ಸೇರಿದುದು. ಬಿತ್ತನೆ, ಸಸಿ ನೆಡುವಿಕೆ, ಕಳೆ ತೆಗೆಯುವಿಕೆ, ಬೆಳೆಯ ಕಟಾವು, ಹಸನುಗೊಳಿಸುವಿಕೆ ಇತ್ಯಾದಿ ಕೆಲಸಗಳನ್ನು ಮಾಡುವವರು ಮಹಿಳೆಯರು. ನಡುವಿನ ಅವಧಿಯಲ್ಲಿ ಹಿಡುವಳಿದಾರರಿಗೆ ಮಹಿಳಾ ಕೂಲಿಕಾರರ ಅಗತ್ಯವಿರುವುದಿಲ್ಲ. ಹಿಂದಿನಿಂದಲೂ ಇರುವ ಇವೆಲ್ಲ ಸಮಸ್ಯೆಗಳ ಜೊತೆಗೆ ಇತ್ತೀಚೆಗೆ ಕೃಷಿಯನ್ನು ಯಾಂತ್ರೀಕರಣಗೊಳಿಸಲಾಗುತ್ತಿದೆ. ಯಾಂತ್ರೀಕರಣಕ್ಕೂ ಮಹಿಳೆಗೂ ನೇರ ಸಂಬಂಧವಿದೆ. ಯಂತ್ರದ ಬಳಕೆ ಯಾವತ್ತೂ ಮಹಿಳೆಯನ್ನು ಇನ್ನಷ್ಟು ಅಂಚಿಗೆ ತಳ್ಳುತ್ತದೆ. ಮಹಿಳೆಗೆ ತಾಂತ್ರಿಕ ಕೌಶಲ್ಯ ತಿಳಿದಿಲ್ಲ ಎನ್ನುವ



# ಬವಣೆ–ಒಂದು ಅನಿಸಿಕೆ

▪ ಚಂದ್ರಮತಿ ಸೋಂದಾ

ಕಾರಣವನ್ನು ಒಡ್ಡಲಾಗುತ್ತದೆ. ದೊಡ್ಡ ಹಿಡುವಳಿದಾರರು ಕೃಷಿ ಕೂಲಿಕಾರರು ಸಿಕ್ಕುತ್ತಿಲ್ಲ ಎನ್ನುವ ನೆವದಲ್ಲಿ ಯಂತ್ರಗಳ ಬಳಕೆಗೆ ಮುಂದಾಗಿದ್ದಾರೆ. ಜಾಗತೀಕರಣದ ಪರಿಣಾಮವಾಗಿ ಕೃಷಿ ವಲಯವನ್ನು ಪ್ರವೇಶಿಸಿರುವ ಕೆಲವು ದೇಶೀ ಮತ್ತು ವಿದೇಶೀ ಕಂಪನಿಗಳು ತುಂಡು ಭೂಮಿಯುಳ್ಳವರ ಭೂಮಿಯನ್ನು ಖರೀದಿಸುವ, ಗುತ್ತಿಗೆ ಪಡೆಯುವ ಮೂಲಕ ಜಮೀನಿನ ಒಡೆಯರೇ ತಮ್ಮ ಜಮೀನಿನಲ್ಲಿ ಕೂಲಿಯಾಗಿ ದುಡಿಯುವ ಪರಿಸ್ಥಿತಿಯನ್ನು ನಿರ್ಮಾಣ ಮಾಡುತ್ತಾರೆ. ಕೃಷಿಯನ್ನು ಒಂದು ಲಾಭದಾಯಕ ಉದ್ಯಮವಾಗಿ ಮಾಡುವುದಾಗಿ ಹೇಳುತ್ತ ಸಾಂಪ್ರದಾಯಿಕ ಕೆಲಸಗಾರರನ್ನು ಅದರಿಂದ ಹೊರಗೇ ಉಳಿಸಿಬಿಡುವ ಹುನ್ನಾರದಲ್ಲಿ ನಿರತರಾಗಿದ್ದಾರೆ. ಉದಾ: ಒಂದು ಎಕರೆ ಭತ್ತದ ಫಸಲನ್ನು ಒಂದು ಯಂತ್ರ ನಿಮಿಷಗಳ ಲೆಕ್ಕದಲ್ಲಿ ಕತ್ತರಿಸುತ್ತದೆ. ಅಷ್ಟು ಫಸಲಿನ ಕಟಾವಿಗೆ ಹತ್ತಾರು ಆಳುಗಳು ಬೇಕಾಗುತ್ತಾರೆ. ಇತ್ತೀಚೆಗೆ ಅಡಕೆ ಸುಲಿಯುವ ಯಂತ್ರವನ್ನು ಅಭಿವೃದ್ಧಿಪಡಿಸಲಾಗಿದೆ. ನೂರು ಜನ ಸುಲಿಯುವಷ್ಟು ಅಡಕೆಯನ್ನು ಕೆಲವೇ ಗಂಟೆಗಳಲ್ಲಿ ಯಂತ್ರದಿಂದ ಸುಲಿಯಲಾಗುತ್ತದೆ.

ಯಂತ್ರವನ್ನು ಅಡಿಕೆ ಸುಲಿಯಲು ಬಳಸುವುದು ಎಲ್ಲರಿಂದಲೂ ಸಾಧ್ಯವಾಗುವುದಿಲ್ಲ. ಕೈಯಿಂದ ಅಡಿಕೆ ಸುಲಿಸುವುದು ಸದ್ಯಕ್ಕೆ ಅನಿವಾರ್ಯವೇ. ಕಳೆದ 3–4 ವರ್ಷಗಳಿಂದ ಮಲೆನಾಡಿನಲ್ಲಿ ಅಡಕೆ ಸುಲಿಯುವ ಮಹಿಳೆಯರು ತಮ್ಮದೇ ಆದ ಒಂದು ಗುಂಪನ್ನು ಸೃಷ್ಟಿಸಿಕೊಂಡಿದ್ದಾರೆ. ಅವರು ಒಟ್ಟಾಗಿ ಕುಳಿತು ಅಡಕೆ ಸುಲಿಯಲು ಅನುಕೂಲ ಮಾಡಿಕೊಂಡಿರುವ ಜಾಗಕ್ಕೆ ಅಡಕೆ ಬೆಳೆಗಾರರು ಫಸಲನ್ನು ಕೊಂಡೊಯ್ದಲ್ಲಿ ಅವರು ಅಲ್ಲಿ ಸುಲಿಯುತ್ತಾರೆ. ಬೆಳೆಗಾರರ ಮನೆಗೆ ಹೋಗಿ ಅಡಕೆ ಸುಲಿಯುವ ಪದ್ಧತಿ ಕಡಿಮೆಯಾಗುತ್ತಿದೆ. ಇದರಿಂದ ಕೆಲಮಟ್ಟಿಗೆ ಶೋಷಣೆಗೆ ತಡೆ ಬೀಳುತ್ತದೆ.

ಜಾಗತೀಕರಣದ ಕಾರಣದಿಂದ ವಿದೇಶೀ ಕಂಪನಿಗಳು ನಮ್ಮ ನೆಲದಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಆಸಕ್ತಿ ತೋರಿಸುತ್ತಿದೆ. ಸರಕಾರಗಳು ಬಂಡವಾಳಶಾಹಿಗಳನ್ನು ಕೆಂಪುಹಾಸು ಹಾಕಿ ಸ್ವಾಗತಿಸುತ್ತಿವೆ. ವಿಶೇಷ ಆರ್ಥಿಕವಲಯದ ಹೆಸರಿನಲ್ಲಿ ಅನೇಕ ವೇಳೆ ಕೃಷಿಯೋಗ್ಯ ಭೂಮಿಯನ್ನು ಕೈಗಾರಿಕಾ ಸ್ಥಾಪನೆಗೆ ಪರಭಾರೆ ಮಾಡಲಾಗುತ್ತಿದೆ. ಇದು ಗ್ರಾಮೀಣ ಆರ್ಥಿಕತೆಯ ಮೇಲೆ ಪರಿಣಾಮ ಬೀರುತ್ತದೆ. ಕೃಷಿಕೂಲಿಕಾರರು ಕೆಲಸ ಕಳೆದುಕೊಳ್ಳುತ್ತಾರೆ. ತುಂಡು ಭೂಮಿ ಇರುವವರು ಭೂಮಿಯ ಉತ್ಪಾದನೆಯೂ ಸಾಕಾಗದೆ, ಕೂಲಿಯೂ ದೊರೆಯದೆ ಕಂಗಾಲಾಗುತ್ತಾರೆ. ಕುಟುಂಬದ ಶಿಥಿಲತೆಗೂ ಇದು ಕಾರಣವಾಗುತ್ತದೆ. ಕೆಲಸವನ್ನರಸಿ ಪುರುಷರು ಸಮೀಪದ ಪಟ್ಟಣ–ನಗರಗಳಿಗೆ ವಲಸೆ ಹೋಗುತ್ತಾರೆ. ಮಹಿಳೆಯರಿಗೆ ಮನೆಯ ಹಿರಿಯರನ್ನು, ಮಕ್ಕಳನ್ನು ನೋಡಿಕೊಂಡು ಮನೆಯಲ್ಲಿಯೇ ಇರುವುದು ಅನಿವಾರ್ಯವಾಗುತ್ತದೆ. ಕೃಷಿಯೇತರ ಕೆಲಸದಿಂದ ಹೊಟ್ಟೆ ತುಂಬಿಸಿಕೊಳ್ಳುವ ಅನಿವಾರ್ಯತೆ ಎದುರಾಗುತ್ತದೆ.

## ಕಡಿಮೆ ಕೂಲಿ

ಇತರ ಕ್ಷೇತ್ರಗಳಿಗೆ ಹೋಲಿಸಿದರೆ, ಕೃಷಿವಲಯದಲ್ಲಿ ಕೊಡುವ ಕೂಲಿ ತೀರ ಕಡಿಮೆ. ಕೃಷಿ ಉತ್ಪನ್ನಗಳಿಗೆ ದೊರೆಯುವ ದರದ ಅನಿಶ್ಚಿತತೆಯೂ ಇದಕ್ಕೆ ಕಾರಣ ಎನ್ನುವುದು ನಿಜ. ಆದರೆ ವ್ಯಕ್ತಿಯ ಬದುಕಿನ ಮೂಲಭೂತ ಅಗತ್ಯಗಳನ್ನು ಪೂರೈಸುವಷ್ಟಾದರೂ ದುಡಿಮೆಯ ಪ್ರತಿಫಲ ದೊರಕಬೇಕು. ಕೃಷಿ ಕೂಲಿಕಾರರಿಗೆ ಅದು ಸಿಗುತ್ತಿಲ್ಲ. ಸರಕಾರ ಕನಿಷ್ಠ ಕೂಲಿ ದರವನ್ನು ನಿಗದಿಪಡಿಸಿದ್ದರೂ ಕೃಷಿ ಕೂಲಿಕಾರರು ಅಸಂಘಟಿತ ವಲಯಕ್ಕೆ ಸೇರಿರುವುದರಿಂದ ಅವರಿಗೆ ಯಾವುದೂ ಅನ್ವಯಿಸುವುದಿಲ್ಲ. ಪಿತೃಪ್ರಧಾನತೆಗೂ ಮಹಿಳೆಗೆ ನೀಡುವ ಕೂಲಿಗೂ ಪರಸ್ಪರ ಸಂಬಂಧವಿದೆ. ಪಿತೃಪ್ರಧಾನತೆ ಮಹಿಳೆ ಮಾಡುವ ಕೆಲಸವನ್ನು ಕನಿಷ್ಠ ಎಂದು ತಿಳಿಯುತ್ತದೆ. ಹಾಗಾಗಿ, ಪುರುಷ ಮತ್ತು ಮಹಿಳೆಯರಿಗೆ ಕೊಡುವ ಕೂಲಿಯಲ್ಲಿ ತಾರತಮ್ಯ ಮಾಡುತ್ತ ಬರಲಾಗಿದೆ. 1976ರಲ್ಲಿಯೇ ಸಮಾನ ಕೆಲಸಕ್ಕೆ ಸಮಾನ ವೇತನ ಕಾಯ್ದೆ ಜಾರಿಗೆ ಬಂದಿದೆ. ನಾಲ್ಕು ದಶಕಗಳ ನಂತರವೂ ಅದು ಅನುಷ್ಠಾನಕ್ಕೆ ಬಂದಿಲ್ಲ ಎಂದರೆ ಈ ಕ್ಷೇತ್ರದಲ್ಲಿನ ಭೂಮಾಲೀಕರ ಹಿಡಿತ ಯಾವ ಬಗೆಯದು ಎನ್ನುವುದು ಚಿಂತನಾರ್ಹ ಸಂಗತಿ. ಅಲ್ಲಲ್ಲಿ ಕೂಲಿ ತಾರತಮ್ಯದ ಬಗೆಗೆ ಹೋರಾಟ ನಡೆದಿವೆ. ಆದರೆ ಅದನ್ನು ಹತ್ತಿಕ್ಕುವ ಜಾಣ್ಮೆ ಭೂಮಾಲೀಕರಿಗಿದೆ. ಉದಾ: ತಮಿಳುನಾಡಿನ





ತಂಜಾವೂರು ಜಿಲ್ಲೆಯಲ್ಲಿ ಮಹಿಳಾ ಕೃಷಿಕೂಲಿಕಾರರು ಸಂಘಟಿತರಾಗಿ ಸಮಾನ ಕೂಲಿಗಾಗಿ ಹೋರಾಡಿದ್ದರು. ಕುಟುಂಬದ 'ಯಜಮಾನ' ಸಂಸ್ಕೃತಿಯನ್ನು ಬಳಸಿಕೊಂಡು, ಗಂಡ ಮತ್ತು ಆ ಕುಟುಂಬದ ಪುರುಷ ಸದಸ್ಯರನ್ನು ಪುಸಲಾಯಿಸಿ ಅಂಥ ಮಹಿಳೆಯರ ಬೇಡಿಕೆಯನ್ನು ದಮನ ಮಾಡುವ ಪ್ರಯತ್ನ ನಡೆಯಿತು. ಮಹಿಳೆಯರು ತಮ್ಮ ಬೇಡಿಕೆಗೆ ಅಂಟಿಕೊಂಡಿದ್ದರಿಂದ ಭೂಮಾಲೀಕರು ಸಫಲರಾಗಲಿಲ್ಲ.

ಈಗ ಕರ್ನಾಟಕವೂ ಸೇರಿದಂತೆ ಎಲ್ಲ ಕಡೆ 'ರೈತಸಂಘ' ಗಳಿವೆ. ರೈತರು ಬೆಳೆಯುವ ಬೆಳೆಗಳಿಗೆ ಮಾರುಕಟ್ಟೆ ಒದಗಿಸುವಂತೆ, ವಿಮಾ ಸೌಲಭ್ಯ ನೀಡುವಂತೆ, ಪೂರಕ ಬೆಲೆ ದೊರೆಕಬೇಕೆಂದು ಇವು ಕ್ರಿಯಾಶೀಲವಾಗಿ ಹೋರಾಟ ಮಾಡುತ್ತ ಬಂದಿವೆ. ಕೆಲವು ಕಡೆ ಮಹಿಳಾ ವಿಭಾಗವೂ ಇದೆ. ಆದರೆ ಕೃಷಿ ಕೂಲಿಯಲ್ಲಿನ ಲಿಂಗವ್ಯವಸ್ಥೆಯ ತಾರತಮ್ಯದ ಬಗ್ಗೆ ಅಷ್ಟಾಗಿ ಗಮನ ಹರಿಸುತ್ತಿಲ್ಲ. 'ಸಮಾನ ಕೆಲಸಕ್ಕೆ ಸಮಾನ ಕೂಲಿ' ಎನ್ನುವುದು ರೈತ ಹೋರಾಟದ ಆದ್ಯತೆಗಳಲ್ಲಿ ಸೇರಿಲ್ಲ. ಪುರುಷರು ಮಾಡುವಷ್ಟೇ ಅವಧಿಯ ದುಡಿಮೆಯನ್ನು ಮಹಿಳೆಯರೂ ಮಾಡುತ್ತಾರೆ. ಪುರುಷರಿಗೆ ನೀಡುವ ಕೂಲಿಯ ಶೇ. 60–70ರಷ್ಟು ಮಾತ್ರ ಮಹಿಳೆಯರಿಗೆ ದೊರೆಯುತ್ತದೆ. ಕೆಲವು ಕೆಲಸಗಳಲ್ಲಿ ಪುರುಷ ಕೆಲಸಗಾರರಿಗೆ ಮಾತ್ರ ಊಟ ಕೊಡುವ ರೂಢಿಯಿದೆ. ಕೃಷಿ ಕೆಲಸಗಳಲ್ಲಿ ಯಾವುದೂ ಕುಶಲ ಕೆಲಸಗಳಲ್ಲ. ನಾಟಿಯನ್ನೇ ಉದಾಹರಣೆಯಾಗಿ ತೆಗೆದುಕೊಂಡರೆ, ಪುರುಷ ಕೂಲಿ ಯಾಳುಗಳು ಮಹಿಳಾ ಕೂಲಿಗಳು ಕಿತ್ತ ಸಸಿಗಳನ್ನು ಪೆಂಡೆಯಾಗಿ ಮಾಡಿ ಗದ್ದೆಗಳಲ್ಲಿ ಇಡುತ್ತಾರೆ. ಅದನ್ನು ಕೆಸರು ಗದ್ದೆಯಲ್ಲಿ ನಿಂತು ನೆಡುವವರು ಮಹಿಳೆಯರು. ಆರೆಂಟು ಗಂಟೆಗಳ ಕಾಲ ಸೊಂಟ ಬಗ್ಗಿಸಿ ನಿಂತು ಸಸಿ ಊರುವುದು ಸಾಕಷ್ಟು ದೈಹಿಕ ಶ್ರಮ ಬೇಡುತ್ತದೆ. ಭತ್ತ, ಜೋಳ, ಗೋಧಿ ಮುಂತಾದ ಧಾನ್ಯ ಗಳನ್ನು ಬಗ್ಗಿ ನಿಂತು ಕಟಾವು ಮಾಡಬೇಕಾಗುತ್ತದೆ. ಇದಕ್ಕೆ ಹೆಚ್ಚಿನ ಶ್ರಮದ ಅಗತ್ಯವಿದೆ. ಹೀಗಿದ್ದೂ, ಸಿಗುವ ಕೂಲಿ ಕಡಿಮೆಯೇ. ಬಸುರಿ, ಚಿಕ್ಕ ಮಗುವಿನ ತಾಯಿ ಯಾರೇ ಇರಲಿ, ಅವರಿಗೆ ಕೆಲಸದಲ್ಲಿ ಯಾವ ರಿಯಾಯಿತಿಯೂ ಇರುವುದಿಲ್ಲ. ಕೆಲಸ ಮಾಡುವ ದಿನಗಳಿಗೆ ಮಾತ್ರ ಕೂಲಿ. ಕೆಲಸದ ಸಂದರ್ಭದಲ್ಲಿ ಆಗುವ ಅಪಾಯಗಳಿಗೆ ಯಾವ ಪರಿಹಾರವೂ ಸಿಗುವುದಿಲ್ಲ. ಆರೋಗ್ಯ ವಿಮಾ ಸವಲತ್ತು ಅಥವಾ ರಜೆಯ ಸೌಲಭ್ಯ ಇರುವುದಿಲ್ಲ.



ಕೃಷಿ ಕೆಲಸದಲ್ಲಿ ಕಡಿಮೆ ಕೂಲಿ ಇದ್ದರೂ ಮಹಿಳೆಯರು ಬದಲೀ ದುಡಿಮೆಯ ಮೂಲವನ್ನು ಹುಡುಕಿಕೊಳ್ಳುವುದು ಕಷ್ಟ. ಮಕ್ಕಳು ಮತ್ತು ಕುಟುಂಬದ ನಿರ್ವಹಣೆಯ ಹೊಣೆಗಾರಿಕೆ ಅವಳ ಹೆಗಲಿಗೆ ಇರುವುದರಿಂದ ಅವಳ ಚಲನಶೀಲತೆ ಸೀಮಿತವಾಗಿರುತ್ತದೆ. ಸರಿಯಾದ ಕೂಲಿ ದೊರೆಯದಿರುವಾಗ, ಬರ ಇತ್ಯಾದಿ ಸಂದರ್ಭದಲ್ಲಿ ಪುರುಷರು ದುಡಿಮೆಯನ್ನರಸಿ ಬೇರಡೆಗೆ ಹೋಗುತ್ತಾರೆ. ಆಗ ಮಹಿಳೆ ಕುಟುಂಬ ನಿರ್ವಹಣೆಯ ಸಂಪೂರ್ಣ ಜವಾಬ್ದಾರಿಯನ್ನೂ ಹೊರಬೇಕಾಗುತ್ತದೆ. ಮಹಿಳೆಯ ಇಂಥ ಪರಿಸ್ಥಿತಿಯನ್ನು ಭೂಮಾಲೀಕರು ಬಳಸಿಕೊಳ್ಳುವುದೂ ಇದೆ.

ಚಹಾ, ಕಾಫಿ, ರಬ್ಬರ್ ಮುಂತಾದ ತೋಟದ (ಪ್ಲಾಂಟೇಶನ್) ಕೆಲಸಗಾರರು ಪ್ಲಾಂಟೇಶನ್ ಲೇಬರ್ ಆಕ್ಟ್ 1951ರ ಅಡಿಯಲ್ಲಿ ಬರುವುದರಿಂದ ಅವರಿಗೆ ಕೆಲವು ಅನುಕೂಲಗಳನ್ನು ಒದಗಿಸುವುದು ಅನಿವಾರ್ಯವೇ. ಆದರೆ ಅಲ್ಲಿಯೂ ಸಮಾನ ಕೆಲಸಕ್ಕೆ ಸಮಾನ ವೇತನ ಜಾರಿಯಲ್ಲಿಲ್ಲ. ವೇತನ ತಾರತಮ್ಯ ಚಾಲ್ತಿಯಲ್ಲಿದೆ. ಈ ವಲಯದಲ್ಲಿ ಖಾಯಂ ಕೆಲಸಗಾರರು ಅಧಿಕ ಸಂಖ್ಯೆಯಲ್ಲಿದ್ದಾರೆ. ಅವರ ಕುಟುಂಬದ ಆರೋಗ್ಯ, ಮಕ್ಕಳ ಶಿಕ್ಷಣ, ಹೆರಿಗೆ ರಜೆಯ ಸವಲತ್ತುಗಳನ್ನು ಒದಗಿಸಬೇಕೆನ್ನುತ್ತದೆ ಕಾನೂನು. ದೊಡ್ಡ ಪ್ರಮಾಣದ ಬೆಳೆಗಾರರು ಕೆಲವು ಸವಲತ್ತುಗಳನ್ನು ನೀಡುತ್ತಾರೆ. ಆದರೆ ಚಿಕ್ಕ ಹಿಡುವಳಿದಾರರು ಸಂಖ್ಯೆ ಲೆಕ್ಕಾಚಾರದ ಕಾರಣ ನೀಡಿ ಎಲ್ಲವುಗಳಿಂದ ತಪ್ಪಿಸಿಕೊಳ್ಳುತ್ತಾರೆ.

ಹೊರಗಿನ ದುಡಿಮೆಗೆ ಹೋದರೂ ಮಹಿಳೆಗೆ ಅವಳ ದುಡಿಮೆಯ ಪ್ರತಿಫಲ ಅವಳ ಕೈಗೆ ಸಿಗುವುದು ಕಡಿಮೆ. ಅವಳ ಕೂಲಿ ಮನೆಯ ಯಜಮಾನನ ಕೈಸೇರುತ್ತದೆ. ಅವಳ ಸ್ವಂತ ಅಗತ್ಯಗಳಿಗೂ ಅವನೆದುರು ಕೈಚಾಚಬೇಕಾದ ಪರಿಸ್ಥಿತಿ ಅವಳದು. ಈಗಲೂ ಮನೆವಾಳ್ತೆ ಮಹಿಳೆಯದೇ ಎನ್ನುವ ಪಿತೃಪ್ರಧಾನ ದೃಷ್ಟಿಕೋನದಲ್ಲಿ ವ್ಯತ್ಯಾಸವಾಗಿಲ್ಲ. ಇದರಿಂದ ಮನೆಯ ಯಾವತ್ತೂ ಕೆಲಸಗಳು ಅವಳಿಗಾಗಿ ಕಾದಿರುತ್ತವೆ. ತುಂಡು ಭೂಮಿ ಇರುವ ಕುಟುಂಬದಲ್ಲಿ ಮನೆಯ ಜಮೀನಿನಲ್ಲಿ ಇಬ್ಬರೂ ಸೇರಿ ಕೆಲಸ ಮಾಡಿದರೂ ಅದರ ಉತ್ಪನ್ನದ ವಿಲೇವಾರಿ ಮತ್ತು ಹಣದ ವಹಿವಾಟು ಪುರುಷನ ಕೈಯಲ್ಲಿರುತ್ತದೆ. ಉದಾ: ರೇಷ್ಮೆ ಕೃಷಿಯ ಬಹುಪಾಲು ಕೆಲಸಗಳನ್ನು ಮಹಿಳೆಯರು ನಿಭಾಯಿಸುತ್ತಾರೆ. ಚಾಕಿಕಟ್ಟುವಲ್ಲಿಂದ ಪ್ರಾರಂಭಿಸಿ, ಗೂಡು ಸೋಸುವವರೆಗಿನ ಕೆಲಸಗಳಲ್ಲಿ ಮಹಿಳೆಯರ ಪಾಲು ಅಧಿಕ. ಮನೆಯ ಕೆಲಸಗಳ ಜೊತೆಗೆ ರೇಷ್ಮೆಬೆಳೆಗೆ ಸಂಬಂಧಿಸಿದ ಕೆಲಸಗಳನ್ನು ಮಹಿಳೆಯರು ಮಾಡುತ್ತಿದ್ದಾರೆ. ನೆಲವನ್ನು ಹದಗೊಳಿಸಿ, ಹಿಪ್ಪುನೇರಳೆ ಕಡ್ಡಿಗಳನ್ನು ನೆಡುವ ಕೆಲಸಗಳಲ್ಲಿ ಇಬ್ಬರೂ ಭಾಗಿಗಳು. ಕುಟುಂಬದ ಆರ್ಥಿಕತೆಯನ್ನು ಗಟ್ಟಿಗೊಳಿಸುವ ಈ ಕೆಲಸಗಳಲ್ಲಿ ಮಹಿಳೆಯರು ಬಹಳ ಹಿಂದಿನಿಂದಲೂ ತೊಡಗಿಕೊಂಡಿದ್ದು ಎಷ್ಟೋ ಸಂದರ್ಭಗಳಲ್ಲಿ ಮಹಿಳೆ ಬೀದಿಪಾಲಾಗದಂತೆ ಆರ್ಥಿಕವಾಗಿ ಬಲಗೊಳ್ಳುವುದರತ್ತ ಹೆಜ್ಜೆ ಇಡಲು ಈ ಕೃಷಿ/ಉದ್ಯಮ ಅವಳ ಕೈಹಿಡಿದು ನಡೆಸುತ್ತ ಬಂದಿದೆ. ಹುಳು ಸಾಕಣೆಯೊಂದೆ ಅಲ್ಲ, ನೂಲು ತೆಗೆಯುವುದರಲ್ಲಿಯೂ ಮಹಿಳೆಯ ಶ್ರಮ ಗಮನಾರ್ಹವಾಗಿದೆ. ಆದರೆ ಮಾರುಕಟ್ಟೆಯ ವ್ಯವಹಾರ ಮಾತ್ರ ಸಂಪೂರ್ಣವಾಗಿ ಪುರುಷನದು.

## ಲೈಂಗಿಕ ಶೋಷಣೆ

ಕೃಷಿ ಕೆಲಸ ಮಾಡುವ ಮಹಿಳೆಯರು ಎರಡು ನೆಲೆಯಿಂದ ಲೈಂಗಿಕ ಶೋಷಣೆಗೆ ಒಳಗಾಗುತ್ತಾರೆ. ತಮ್ಮೊಂದಿಗೆ ಕೆಲಸ ಮಾಡುವ ಪುರುಷರಿಂದ

ಮತ್ತು ಭೂಮಾಲೀಕರಿಂದ. ಮಹಿಳೆಯನ್ನು ಲೈಂಗಿಕವಾಗಿ ಉಪಯೋಗಿಸುವುದು ತಮ್ಮ ಜನ್ಮಸಿದ್ಧ ಹಕ್ಕು ಎಂದು ತಿಳಿಯುವ ಭೂಮಾಲೀಕರು (ಎಲ್ಲರೂ ಅಲ್ಲ) ಕೆಲಸದ ನೆಪದಿಂದ ಮಹಿಳಾ ಕೆಲಸಗಾರರ ಮೈಮುಟ್ಟುವಿಕೆ, ಲೈಂಗಿಕ ಅರ್ಥಕೊಡುವ ಮಾತು, ಒಬ್ಬಂಟಿಯಾಗಿ ಸಿಗುವಂತೆ ಉಪಾಯ ಮಾಡುವಿಕೆಗಳ ಮೂಲಕ ತಮ್ಮ ಲೈಂಗಿಕ ಬಯಕೆ ತೀರಿಸಿಕೊಳ್ಳಲು ಮುಂದಾಗುತ್ತಾರೆ. ಮಹಿಳಾ ಕೂಲಿಕಾರರು ಭೂಮಾಲೀಕರ ಇಚ್ಛೆ ಪೂರೈಸದಿದ್ದಲ್ಲಿ ಕೂಲಿಯಲ್ಲಿ ಕಡಿತ, ಕೆಲಸದ ನಿರಾಕರಣೆ ಮುಂತಾದ ಕಿರಿಕಿರಿಯನ್ನು ಎದುರಿಸ ಬೇಕಾಗುತ್ತದೆ. ಕೆಲವೊಮ್ಮೆ ಕೆಲಸ ಮಾಡಿಸುವ, ಜೊತೆಯಲ್ಲಿ ಕೆಲಸ ಮಾಡುವ ಪುರುಷ ಕೆಲಸಗಾರರೂ ಲೈಂಗಿಕವಾಗಿ ಮಹಿಳೆಯರನ್ನು ಬಳಸಿಕೊಳ್ಳಲು ಮುಂದಾಗುತ್ತಾರೆ. ವಿರೋಧಿಸಿದರೆ ಕೆಲಸ ನೀಡದೆ ಸಂಪಾದನೆಗೆ ಖೋತ ಬೀಳಬಹುದು ಎನ್ನುವ ಭಯ ಅವರನ್ನು ಕಾಡುತ್ತದೆ. ತುತ್ತನ್ನು ಕಳೆದುಕೊಳ್ಳುವ ಭಯ ಒಂದೆಡೆ, ಲೈಂಗಿಕ ಕಿರುಕುಳ ಇನ್ನೊಂದೆಡೆ.

ಇತ್ತೀಚೆಗೆ ಸಾಂಪ್ರದಾಯಿಕ ಕೃಷಿಯಲ್ಲದೆ, ಹೊಸ ಹೊಸ ಕೃಷಿಯನ್ನು ಪ್ರಾರಂಭಿಸಲಾಗಿದೆ. ಉದಾ: ಬೆಂಗಳೂರಿನ ಸುತ್ತಮತ್ತಲಿನ ಗ್ರಾಮೀಣ ಪ್ರದೇಶಗಳಲ್ಲಿ ವಿದೇಶೀ ಕಂಪನಿಗಳು ಪುಷ್ಪ ಕೃಷಿಯನ್ನು ಪ್ರಾರಂಭಿಸಿವೆ. ಹೂಗಳನ್ನು ಕೊಯ್ಯುವ, ಕೊಯ್ದ ಹೂಗಳನ್ನು ಪ್ಯಾಕ್ ಮಾಡುವ ಕೆಲಸಗಳಿಗೆ ಸುತ್ತಮುತ್ತಲಿನ ಮಹಿಳೆಯರನ್ನು ಬಳಸಿಕೊಳ್ಳಲಾಗುತ್ತಿದೆ. ಕಂಪನಿಗಳು ಮಹಿಳೆಯರನ್ನು ನೇರವಾಗಿ ಕೂಲಿಯಾಳಾಗಿ ನಿಯಮಿಸಿಕೊಳ್ಳುವುದಿಲ್ಲ. ಊರಿನ ಮುಖಂಡನನ್ನು ಸಂಪರ್ಕಿಸಿ ಅವನ ಮೂಲಕ ಕೆಲಸ ಮಾಡಿಸುತ್ತಾರೆ. ಊಳಿಗಮಾನ್ಯ ಪದ್ಧತಿಯ ಇನ್ನೊಂದು ರೂಪವಾಗಿ ಇದು ಕಾಣಿಸುತ್ತದೆ. ಊರಿನ ಮುಖಂಡನಿಗೆ ತನಗೊಂದು ಯಜಮಾನಿಕೆ ದೊರೆತುದರ ಜೊತೆಗೆ, ಹಿರಿಯ ಅಧಿಕಾರಗಳೊಂದಿಗೆ ಸಂಪರ್ಕ ಉಂಟಾಗುತ್ತದೆ ಎನ್ನುವ ಹೆಮ್ಮೆ. ಇಲ್ಲಿ ಸಾಕಷ್ಟು ಲೈಂಗಿಕ ಶೋಷಣೆ ನಡೆಯುತ್ತದೆ ಎನ್ನಲಾಗುತ್ತಿದೆ. ಮಹಿಳೆಯರಲ್ಲದೆ, ಅಪ್ರಾಪ್ತ ವಯಸ್ಸಿನ ಹೆಣ್ಣುಮಕ್ಕಳನ್ನೂ ಜೀತದವರಂತೆ ದುಡಿಸಿಕೊಳ್ಳಲಾಗುತ್ತಿದೆ.

### ಕೃಷಿಕೂಲಿಕಾರ ಮಹಿಳೆಯರ ಹಕ್ಕೊತ್ತಾಯದ ಕೆಲವು ಅಂಶಗಳು:

1. ಕನಿಷ್ಠ ಕೂಲಿ ಮತ್ತು ಸಮಾನ ವೇತನ
2. ವರ್ಷಕ್ಕೆ ಕನಿಷ್ಟ ನೂರು ದಿನಗಳ ಕೆಲಸ (ಲೇಬರ್ ಲಾದಂತೆ)
3. ಸಾಮಾಜಿಕ ಭದ್ರತೆ (ಹೆರಿಗೆ ಭತ್ಯೆ, ಆರೋಗ್ಯ ವಿಮೆ, ಅಪಘಾತ ವಿಮೆ ಇತ್ಯಾದಿ)
4. ಜಂಟಿಯಾಗಿ ಪಟ್ಟಾ ನೀಡಿಕೆ
5. ಕೃಷಿಯೋಗ್ಯ ಭೂಮಿಯನ್ನು ಇತರ ಕೆಲಸಕ್ಕೆ ಬಳಸದಂತೆ ತಡೆ
6. ದ್ವಾಕ್ರಾ ಮತ್ತು ಇತರ ಯೋಜನೆಗಳ ಸಮರ್ಥ ಜಾರಿ
7. ಹಳ್ಳಿಗಳಲ್ಲಿ ಮದ್ಯ ಮಾರಾಟ ನಿಷೇಧ

❑



## ದ್ವಂದ್ವ

ತೀರ್ಥಯಾತ್ರೆಗೈದಿಲ್ಲ
ಪ್ರವಾಸ ಪ್ರಪಂಚ ಗೊತ್ತಿಲ್ಲ
ದಿನದಲ್ಲಿ ಮೈಲುಗಟ್ಟಲೆ ದಾರಿ
ಕ್ರಮಿಸಿ ಬಿಡುತ್ತಾಳೆ
ಅವಳದು ನಯಾಪೈಸೆ
ಖರ್ಚಿಲ್ಲದ ಪಯಣ

ಅಡುಗೆ ಮನೆಯಿಂದ ಹಜಾರದವರೆಗೆ
ಹಜಾರದಿಂದ ಅಡುಗೆಮನೆಯವರೆಗೆ
ಯಾರ ಲೆಕ್ಕಕ್ಕೂ ಸಿಕ್ಕದ ಅಳತೆ

ಒಗ್ಗರಣೆಯ ಘಾಟು
ಹಾದು ಹೋದಷ್ಟು ದೂರ
ಸಾಗಿದ್ದೇನೆಯೇ ತಾನು?
ಸಣ್ಣದೊಂದು ನಿಡುಸುಯ್ಯುವಿಕೆ
ಅದಕ್ಕೆ ದಕ್ಕಿದ ಭಾಗ್ಯ ತನ್ನದೂ ಅಲ್ಲವೇ?
ಒಳಗೊಂದು ಸಮಜಾಯಿಷಿ.

ಛಳ್ಳನೆ ಉಳುಕಿದ ಕಾಲಿನಲ್ಲಿ
ಪಿಟಿಪಿಟಿಯೆನ್ನುವ ನೋವು
ಮನೆಯೊಳಗಿದ್ದುಕೊಂಡೇ
ಕಾಲು ನೋಯುವುದುಂಟೇ?
ಹೇಳಿಬಿಟ್ಟರೆ....
ಅಪಹಾಸ್ಯ ನಗೆಗೇಡು.

ಬೇಡ ಇರಲಿ ಹಾಗೆ
ನೋವು-ಊತ ಕಾಣುವುದಿಲ್ಲ
ಹೊರಗೆ

ಕಿಟಕಿ ತೆರೆದಷ್ಟೂ ಅಗಲ
ಇಳಿಯುತ್ತಿದೆ ನೇರ ಕಣ್ಣೊಳಗೆ
ಬಯಲ ಲೋಕದ ಬೆರಗಲಿ
ಮನಸ್ಸು ಬಯಸುತ್ತಿದೆ ಏನನ್ನು?!
ಅಭ್ಯಾಸ ಬಲ
ಹೊಸಿಲು ದಾಟಲು ಒಪ್ಪುವುದಿಲ್ಲ
ಕಾಲು.

ಅವಳಿಗೆ ಹೊಸಿಲೋ...
ಹೊಸಿಲಿಗೆ ಅವಳೋ...
ಯಾರಿಗೆ ಯಾರು ಕಾವಲು...?
ಅವಳಿಗೂ ಗೊತ್ತಿಲ್ಲ
ದ್ವಂದ್ವ.

■ ಸ್ಮಿತಾ ಅಮೃತರಾಜ್ ಸಂಪಾಜೆ, ಕೊಡಗು

❑



# ಕೃಷಿಯಲ್ಲಿ ಮಹಿಳೆ; ಹೆಚ್ಚಿದ ಹೊರೆ

■ಕೆ.ಪಿ. ಸುರೇಶ್

ಜಾಗತೀಕರಣದೊಂದಿಗೆ ಭಾರತದ ಕೃಷಿ ಅಸ್ಥಿರಗೊಳ್ಳುತ್ತಿರುವ ಎಲ್ಲ ಪುರಾವೆಗಳೂ ಅನಾವರಣಗೊಳ್ಳುತ್ತಿವೆ. ಆದರೆ ಇದರೊಂದಿಗೆ ನಿಧಾನವಾಗಿಯಾದರೂ ದೃಢಗೊಂಡಿರುವ ಇನ್ನೊಂದು ಅಂಶವೆಂದರೆ ಭಾರತದ ಕೃಷಿಯ ಹೊರೆ ಮಹಿಳೆಯ ಮೇಲೆ ಬೀಳುತ್ತಿರುವುದು.

ಮಳೆಯಾಶ್ರಿತ ಕೃಷಿ ಪ್ರದೇಶ ನಮ್ಮ ದೇಶದಲ್ಲಿ ಪ್ರಧಾನವಾಗಿರುವುದು, ಮತ್ತು ಈ ಪ್ರದೇಶದ ಬಹುತೇಕ ರೈತರು ತೀರಾ ಸಣ್ಣ ಹಿಡುವಳಿದಾರರಾಗಿರುವುದು ಗಮನಿಸಬೇಕಾದ ಅಂಶ. ಹಸಿರು ಕ್ರಾಂತಿಯ ತರುವಾಯ ನಮ್ಮ ಸರ್ಕಾರ ತನ್ನ ಕೃಷಿ ಅಭಿವೃದ್ಧಿಯನ್ನು ಸತತವಾಗಿ ನೀರಾವರೀ ಪ್ರದೇಶದ ಮೇಲೆ ಕೇಂದ್ರೀಕರಿಸಿದೆಯಷ್ಟೇ ಅಲ್ಲ, ಈ ಮಳೆಯಾಶ್ರಿತ ಕೃಷಿ ಉಪಯೋಗವಿಲ್ಲದ್ದು ಎಂಬಂತೆ ಈ ಪ್ರದೇಶವನ್ನು ಸಂಪೂರ್ಣ ನಿರ್ಲಕ್ಷಿಸಿದೆ. ಈ ಕೃಷಿ ಪ್ರದೇಶದಲ್ಲಿ ಯಾವುದೇ ಹೂಡಿಕೆಯನ್ನು ಮಾಡದೇ ಇದೊಂದು ವ್ಯರ್ಥ ಹೋರಾಟ ಎಂಬ ಮನಸ್ಥಿತಿಯತ್ತ ರೈತರನ್ನು ದೂಡಿದೆ.

ಇದೇ ವೇಳೆಗೆ ಜಾಗತೀಕರಣದ ಫಲವಾಗಿ ಸರ್ಕಾರೀ ವೆಚ್ಚದ ಮೂಲಕವೇ ಬೃಹತ್ ಪ್ರಮಾಣದ ನಗರೀಕರಣ, ಕೈಗಾರಿಕೀಕರಣದ ಕೆಲಸ ನಡೆಯುತ್ತಿದ್ದು, ಬಹುತೇಕ ಗ್ರಾಮೀಣ ರೈತರಿಗೆ ವಲಸೆ ಮೂಲಕ ಇಂಥಾ ಸ್ಥಳಗಳಲ್ಲಿ ಕೆಲಸ ಪಡೆಯುವ ಆಮಿಷವನ್ನೂ ಸೃಷ್ಟಿಸಿದೆ.

ಬೇಸಾಯದಿಂದ ಹುಟ್ಟುವ ಆದಾಯದಿಂದ ಹೊಟ್ಟೆ ಹೊರೆಯುವುದೂ ಕಷ್ಟವೆಂಬ ಸನ್ನಿವೇಶ ಸೃಷ್ಟಿಯಾದಾಗ ಗಂಡಸರು ವಲಸೆ ಹೋಗುತ್ತಾರೆ. ಆದರೆ ಅವರೇನು ಜಮೀನು ಮಾರಿ ಹೋಗುವುದಿಲ್ಲವಲ್ಲ! ಮಳೆಯಾದರೆ ಆಹಾರವಾದರೂ ಬೆಳೆದುಕೊಳ್ಳಲು ಅಂಗೈ ಅಗಲದ ಭೂಮಿ ನೆಚ್ಚಿಕೊಂಡಿರುತ್ತಾರೆ. ಈ ಭೂಮಿಯ ಕೃಷಿ ಮಾಡಲು ದುಡಿಯುವ ಬದಲು ಪೇಟೆಯಲ್ಲಿ ಸಿಗುವ ಕೂಲಿ ದೊಡ್ಡದು ಎಂಬ ಕಾರಣಕ್ಕೇ ಜಮೀನಿನ ಉಸ್ತುವಾರಿಯನ್ನೂ ಮನೆ ಹೆಂಗಸಿನ ತಲೆಗೆ ಕಟ್ಟಿ ನಡೆಯುತ್ತಾರೆ.

ಮಹಿಳೆಗೂ ಇನ್ನೊಂದು ಧಾವಂತವಿದೆ. ಅನಿವಾರ್ಯವಲ್ಲದೆ, ಆಮಿಷಕ್ಕಾಗಿ ಗ್ರಾಮೀಣಸಂಸಾರದ ಮಹಿಳೆಯೊಬ್ಬಳು ಗುಳೇ ಹೋಗಲು ಇಷ್ಟಪಡುವುದೇ ಇಲ್ಲ. ತನ್ನದೆಂಬ ತುಂಡುಭೂಮಿಯೂ ಭದ್ರತೆಯ ಮನೋಭಾವ ಸೃಷ್ಟಿ ಮಾಡುವುದು ಎಲ್ಲರಿಗೂ ಗೊತ್ತೇ ಇದೆ. ಮಳೆ ಯಾವಾಗ ಬರುತ್ತದೆ ಎಂಬ ನಿರ್ದಿಷ್ಟತೆ ಇಲ್ಲದ ಕಾರಣ ಮಹಿಳೆಯರು ಈ ಮಳೆಯಾಶ್ರಿತ ಕೃಷಿಯ ನೊಗ ಹೊರಲು ಆಕಾಶಕ್ಕೆ ಕಣ್ಣಿಟ್ಟು ಕಾಯುತ್ತಿರುತ್ತಾರೆ. ಉಳುಮೆ ಒಂದನ್ನು ಬಿಟ್ಟು ಉಳಿದೆಲ್ಲಾ ಕೆಲಸಗಳನ್ನು ಮಹಿಳೆಯರೇ ಹೆಚ್ಚು ಹೆಚ್ಚಾಗಿ ನಿರ್ವಹಿಸುತ್ತಿರುವುದು ಇತ್ತೀಚೆಗೆ ಕಂಡುಬರುತ್ತಿದೆ.

ಇದನ್ನು ಕೃಷಿಯಲ್ಲಿ ಮಹಿಳೆಯ ಸಬಲೀಕರಣ ಎಂದು ವಾದಿಸಬಹುದು. ಆದರೆ ನಾವು ನೆನಪಿಡಬೇಕಾದದ್ದು ಏನೆಂದರೆ ಇಂದಿಗೂ ಭೂ ಒಡೆತನ ಶೇಕಡಾ 99 ಪಾಲು ಗಂಡಸರ ಹೆಸರಿನಲ್ಲಿದೆ. ಸಾಲ, ಸಬ್ಸಿಡಿ ಎಲ್ಲದಕ್ಕೂ ಗಂಡಸರೇ ಬೇಕು! ಅಂದರೆ ತಾಂತ್ರಿಕ ಕಾರಣಗಳಿಂದಾಗಿ ಜಮೀನು ಮತ್ತು ಬೇಸಾಯ ಕುರಿತಾದ ನಿರ್ಧಾರಗಳನ್ನು ತೆಗೆದುಕೊಳ್ಳುವ ಶಕ್ತಿ, ಇಂಥಾ ಮಹಿಳೆಗೆ ಬಂದಿಲ್ಲ. ಗುಳೇ ಹೋಗುವ ಮೊದಲು ಗಂಡಸು ನಿರ್ಧರಿಸಿದ್ದನ್ನು ಮಾಡುವ. ಮೇಸ್ತ್ರಿ ಕೆಲಸದ ಹೊರೆ ಹೆಚ್ಚಿಗೆ ಬಿದ್ದಿದೆ ಎನ್ನಬಹುದು, ಬೀಜಗೊಬ್ಬರಗಳನ್ನು ಹೊಂದಿಸಿಕೊಳ್ಳಲು ಬೇಕಾದ ಹಣಕಾಸನ್ನು ಈ ಮಹಿಳೆ ಸ್ಥಳೀಯವಾಗಿ ಪಡೆಯಲು ಪರದಾಡುತ್ತಾಳೆ. ಈಗೀಗ ಸ್ವಸಹಾಯ ಸಂಘಗಳ ಮೂಲಕ ಇದು ಸಾಧ್ಯವಾಗುತ್ತಿದ್ದರೂ ಇದನ್ನು ಸಂಪೂರ್ಣ ಚಿತ್ರವೆಂದು ಹೇಳಲಾಗದು.

ಮನೆ ಕೆಲಸ, ಮಕ್ಕಳ ನಿರ್ವಹಣೆಯೊಂದಿಗೆ ಜಮೀನಿನ ಬೇಸಾಯದ ಜವಾಬ್ದಾರಿಯನ್ನು ಮಹಿಳೆ ಹೊರಬೇಕಾದ ಅನಿವಾರ್ಯ ಸ್ಥಿತಿ ನಿರ್ಮಾಣವಾಗಿದ್ದರೂ ಗ್ರಾಮೀಣ ಮಹಿಳೆ ಇದನ್ನು ನಿರ್ವಹಿಸುವ ಸಹಿಷ್ಣುತೆ ಹೊಂದಿದ್ದಾಳೆ.

ಕಳೆದ ದಶಕದಲ್ಲಿ ಕರ್ನಾಟಕವೊಂದರಲ್ಲೇ ಕನಿಷ್ಠ 5000 ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಗೊಬ್ಬರ ಸಿಗದಿರುವುದು, ಬೆಳೆನಾಶ, ಮಾರುಕಟ್ಟೆ ಕುಸಿತ. ಪಂಪ್ ಸೆಟ್ ಸುಟ್ಟು ಹೋಗುವುದು, ಇಂಥಾ ಕಾರಣಗಳಿಂದಾಗಿ ಸಾಲ ತೀರಿಸಲಾಗದೇ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಆದರೆ ಅಚ್ಚರಿಯ ಅಂಶವೇನೆಂದರೆ ಒಬ್ಬಳೇ ಒಬ್ಬಳು ರೈತ ಮಹಿಳೆ ಈ ಕಾರಣಗಳಿಂದಾಗಿ ಸಾವಿಗೆ ಶರಣಾಗಿಲ್ಲ.ಅಷ್ಟೇ ಅಲ್ಲ, ರೈತನ ಆತ್ಮಹತ್ಯೆ ಬಳಿಕ ದಿಕ್ಕೆಟ್ಟ ಸಂಸಾರವನ್ನು , ವ್ಯವಹಾರವನ್ನು ಮುನ್ನಡೆಸುವ ಕೆಲಸ ಮಾಡಿರುವುದು ಕಂಡು ಬರುತ್ತದೆ.

ನಾನೇ ಕಂಡಂತೆ, ಆರು ವರ್ಷಗಳ ಹಿಂದೆ ಪಂಪ್ ಸೆಟ್ ಸುಟ್ಟಿತೆಂಬ ಕಾರಣಕ್ಕೆ ವಿಷ ಕುಡಿದು ಸತ್ತ ರೈತನ ಮಡದಿ, ಎಳ್ಳಷ್ಟೂ ಎದೆಗೆಡದೆ, ನಾಲ್ಕೆಕರೆ ಜಮೀನಿನ ಕೃಷಿ ಮಾಡಿಸುತ್ತಾ, ಮಕ್ಕಳ ವಿದ್ಯಾಭ್ಯಾಸಕ್ಕೂ ಗಮನಕೊಟ್ಟು, ಮಾನವಂತಳಾಗಿ ಸಂಸಾರ ನಡೆಸುತ್ತಿದ್ದಾಳೆ. ಅಷ್ಟೇ ಏಕೆ, ಈ ವಿದ್ಯಮಾನದಿಂದ ಗಳಿಸಿದ ಸ್ಥೈರ್ಯದಿಂದಾಗಿ ಉಳಿದ ಮಹಿಳೆಯರಿಗೂ ಮಾರ್ಗದರ್ಶನ ಮಾಡುತ್ತಿದ್ದಾಳೆ.

ಕೃಷಿಯ ಸೂಕ್ಷ್ಮತೆಗಳನ್ನು ಅರಿತಿರುವ ನಮ್ಮ ಗ್ರಾಮೀಣ ಮಹಿಳೆಯರಿಗೆ ಜಮೀನಿನ ಕುರಿತಾದ ಎಲ್ಲ ನಿರ್ಧಾರಗಳನ್ನು ತೆಗೆದುಕೊಳ್ಳಲು ಬೇಕಾದ ಕಾನೂನು, ತಾಂತ್ರಿಕ ಬದಲಾವಣೆಗಳನ್ನು ಸರ್ಕಾರ ತರಬೇಕು. ಸಾಲ, ಸಬ್ಸಿಡಿ, ಮಾರಾಟ, ಎಲ್ಲವನ್ನೂ ನಿರ್ವಹಿಸಲು ಅವಶ್ಯವಿರುವ ಭೂ ಒಡೆತನವನ್ನು ಮಹಿಳೆಯ ಹೆಸರಿಗೆ, (ಕನಿಷ್ಠ ಜಂಟಿಯಾಗಿ) ವರ್ಗಾಯಿಸಿದರೆ ಮಹಿಳೆ ಈ ಹೊರೆಯನ್ನು ಲೀಲಾಜಾಲವಾಗಿ ನಿರ್ವಹಿಸುವುದರಲ್ಲಿ ಯಾವ ಸಂಶಯವೂ ಇಲ್ಲ. ❑

# ವಲಸೆ ಮತ್ತು ಮಹಿಳೆ

■ ನಿಹಾರಿಕಾ ಶೆಣೈ

ಕೆಲಸದ ಹುಡುಕಾಟದಲ್ಲಿ ಗ್ರಾಮದಿಂದ ಪಟ್ಟಣಕ್ಕೆ ವಲಸೆ ಹೋಗುವ ಕೃಷಿಕರ ಸ್ಥಿತಿ ಶೋಚನೀಯವಾಗಿದೆ. ವಿಪರ್ಯಾಸವೆಂದರೆ ಈ ಬೆಳವಣಿಗೆ ಹೆಚ್ಚು ಹೆಚ್ಚು ಸಂಗತಿಗಳಲ್ಲಿ ಕಂಡುಬರುತ್ತಿದೆ. ಇತ್ತೀಚಿನ ಬರದ ದಾಳಿಯಲ್ಲಿ ನರಳುತ್ತಿರುವ ಗುಲ್ಬರ್ಗಾ, ರಾಯಚೂರು ,ಬೆಳಗಾವಿ ಮತ್ತು ಉತ್ತರ ಕನ್ನಡದ ಹಲವಾರು ತಾಲೂಕುಗಳಲ್ಲಿ ಬರಗಾಲ ನಿವಾರಣೆ ಕಾರ್ಯಕ್ರಮಗಳಾಗಲಿ, ಕುಡಿಯುವ ನೀರಿನ ಸೌಲಭ್ಯ ಗಳಾಗಲಿ,ಪರಿಹಾರ ದೊರಕಿಸಿಕೊಳ್ಳುವಲ್ಲಿ ಸರ್ಕಾರ ತಡ ಮಾಡುವುದರ ಕಾರಣದಿಂದ ರೈತರ ನಿರಾಶೆ ಹೆಚ್ಚಾಗುತ್ತಿದೆ. ತಮ್ಮ ಸಾಲ ತೀರಿಸುವ ವಿಧಾನವಿಲ್ಲದೆ ನಮ್ಮ ದೇಶದ ರೈತರು ಅತ್ಮಹತ್ಯೆಗೆ ಬಲಿಯಾಗುವುದು ಏನೂ ಹೊಸದಲ್ಲ, ಅದು ನಮ್ಮೆಲ್ಲರ ಮನಸ್ಸಿನಲ್ಲಿ ಬರಿ ಒಂದು ಅಂಕಿಸಂಖ್ಯೆ ಆಗಿ ಉಳಿದಿದೆ. ಇದಕ್ಕೆ ಪರ್ಯಾಯವಾಗಿ, ಕೃಷಿಕರು ಬೇಸಾಯವನ್ನು ಬಿಟ್ಟು ನಗರಕ್ಕೆ ಕಟ್ಟಡ ನಿರ್ಮಾಣದಲ್ಲಿ,ಕುಲುಮೆಗಳಲ್ಲಿ, ಉಪಾಹಾರ ಗ್ರಹಗಳಲ್ಲಿ ಕೆಲಸದ ಹುಡುಕಾಟದಲ್ಲಿ ವಲಸೆ ಬರುತ್ತಿದ್ದಾರೆ. 2011ರ ಸೆನ್ಸಸ್ ಪ್ರಕಾರ 1921ರಂದು ಮೊದಲ ಬಾರಿಗೆ 2001-2011ರ ದಶಕದಲ್ಲಿ ಗ್ರಾಮದ ಜನಸಂಖ್ಯೆಗಿಂತ ಪಟ್ಟಣಗಳ ಜನಸಂಖ್ಯೆಯು ಅಧಿಕ ಪ್ರಮಾಣದಲ್ಲಿ ಬೆಳೆಯುತ್ತಿದೆ . ಇದು ನಿರುತ್ಸಾಹಗೊಳಿಸುವಂಥ ಪ್ರವೃತ್ತಿ. ಅದಲ್ಲದೆ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಡಿ ಕೆಲಸ ದೊರೆಯುವ ಸಂಗತಿಗಳು ಕಡಿಮೆ ಮತ್ತು ಅದರಿಂದ ಬರುವ ಸಂಬಳ ತಡವಾಗಿ ತಲುಪುತ್ತದೆ ,ಅದೂ ತಮ್ಮ ಅಗತ್ಯಕ್ಕೆ ಸಾಲುವುದಿಲ್ಲ. ಆದ್ದರಿಂದ, ಅವರು ಪಟ್ಟಣಗಳಲ್ಲಿ ಕೆಲಸ ಮಾಡುವುದನ್ನ ಇಷ್ಟ ಪಡುತ್ತಾರೆ. ಹಳ್ಳಿಯಿಂದ ಪಟ್ಟಣಕ್ಕೆ ಬರುವ ಜನರು ಪರಕೀಯ ವಾತಾವರಣದಲ್ಲಿ ಸ್ಥಾನಮಾನವಿಲ್ಲದ, ರಕ್ಷಣಾರಹಿತ ಬದುಕನ್ನು ಬಾಳುತ್ತಾರೆ. ಕಾನೂನು ರಕ್ಷಣೆ ದೊರೆಯುವ ಅವಕಾಶ ಸಹ ಕಡಿಮೆ. ಈ ಸಂದರ್ಭದಲ್ಲಿ ಒಂದು ಪ್ರಮುಖವಾದ ಬೆಳವಣಿಗೆಯನ್ನು ನಾವು ಗಮನಿಸಬೇಕಾಗಿದೆ. ಕೆಲಸವನ್ನು ಹುಡುಕಿ ನಗರಗಳಿಗೆ ಬರುವುದು ಅತ್ಯಧಿಕವಾಗಿ ಪುರುಷರು,ಆದ್ದರಿಂದ ತಮ್ಮ ಹಳ್ಳಿಗಳಲ್ಲಿ ಇರುವ ಜಮೀನನ್ನು, ತೋಟಗಳನ್ನು ನೋಡಿಕೊಳ್ಳುವ ಭಾರ ಹೆಂಗಸರ ಮೇಲೆ ಬೀಳುತ್ತದೆ.ವ್ಯವಸಾಯದ ಕ್ಷೇತ್ರದಲ್ಲಿ ಹೆಂಗಸರ ಕೊಡುಗೆ ಹೆಚ್ಚಿದ್ದರೂ ಅವರ ಸಂಪಾದನೆ ಪುರುಷರಿಗಿಂತ ಕಡಿಮೆಯೆ ಇದೆ. ಮಹಿಳೆಯರಿಗೆ ಬ್ಯಾಂಕ್ ಸಾಲ, ಕೃಷಿ ತಂತ್ರಜ್ಞಾನ ಮತ್ತು ಮಾರುಕಟ್ಟೆಯ ಮಾಹಿತಿ ತಲುಪುವುದು ಬಹಳ ಕಡಿಮೆ. ಪರಿಸ್ಥಿತಿ ಹೇಗಿದೆ ಅಂದರೆ ಜಮೀನಿನ ಒಡೆತನ ಪುರುಷರಿಗೆ ವಹಿಸಲಾಗಿದೆ. ಆದರೆ ಅದರ ಪಾಲಕರು ಮಹಿಳೆಯರಾಗಿದ್ದಾರೆ. ಮಹಿಳೆಯರ ಕೊಡುಗೆ ಯಾಕೆ ಗುರುತಿಸಲಾಗದು ಅಂತ ನಾವು ಚಿಂತಿಸಬೇಕಾಗಿದೆ. ಒಂದು ಕಾರಣ 'ಕೆಲಸ' ಎಂಬ ಪದದ ಕಿರಿದಾದ ವಿವರಣೆ. ಮಹಿಳೆಯರು ಪೂರೈಸುವ ಹಲವಾರು ಜವಾಬ್ದಾರಿಗಳು ಈ ವಿವರಣೆಗೆ ಒಳಗಾಗುವುದಿಲ್ಲ. ಉದಾಹರಣೆಗೆ, ಮನೆಗೆಲಸ, ಸೌದೆ ತರುವುದು, ತೋಟಗಾರಿಕೆ- ಇವೆಲ್ಲ 'ಕೆಲಸ' ಎಂದು ಗಮನಿಸಲಾಗುವುದಿಲ್ಲ. ಇದರ ಅಪಾಯವೇನೆಂದರೆ ಯೋಜನೆಗಳನ್ನು ರೂಪಿಸುವಾಗ,ಸಂಪನ್ಮೂಲಗಳ ಹಾಗೂ ಮಾಹಿತಿಯ ಹಂಚುವಿಕೆಯಲ್ಲಿ ಮಹಿಳೆಯರ ಕೋರಿಕೆಗಳನ್ನು ಪರಿಗಣಿಸಲಾಗುವುದಿಲ್ಲ, ಹಾಗಾಗಿ ಅವರಿಗೆ ರಾಷ್ಟ್ರೀಯ ಸೌಲಭ್ಯಗಳು, ಸಹಾಯಗಳು ದೊರೆಯುವುದಿಲ್ಲ. ಮಹಿಳೆಯರ ಆರ್ಥಿಕ ಅಸ್ತಿತ್ವ ನಿರಾಕರಿಸಲಾಗಿದೆ. ಕೃಷಿ ಕ್ಷೇತ್ರದಲ್ಲಿರುವ ಮಹಿಳೆಯರ ಕ್ಷೇಮದ ಬಗ್ಗೆ ನಮಗೆ ಕಾಳಜಿ ಇದೆಯೆ?

*(ಹಲವಾರು ಮೂಲಗಳಿಂದ)*

❑





# ವಾರಿಸ್ ಡೇರಿಯ ಅಂತರಂಗದ ಪುಟಗಳಿಂದ

■ಗೀತಾ ಶೆಣೈ

ಅದು ಮರಳುಗಾಡಿನ ರಾತ್ರಿ. ಸುತ್ತ ಎಲ್ಲಿ ನೋಡಿದರೂ ಕಪ್ಪು ಕತ್ತಲು ಆವರಿಸಿದೆ. ಹರಡಿಕೊಂಡಿರುವ ಆಕಾಶಕ್ಕೆ ತೂತು ಕೊರೆದಂತೆ ಅಲ್ಲೊಂದು ಇಲ್ಲೊಂದು ಮಿನುಗುವ ನಕ್ಷತ್ರಗಳು. ಕಾದ ನೆಲಕ್ಕೆ ತಂಪಾದ ನೀರನ್ನು ಸಿಂಪಡಿಸಿದಂತೆ ಮೆಲ್ಲಗೆ ಸುಳಿವ ತಂಗಾಳಿ. ಯಾರೋ ತಟ್ಟಿ ಮಲಗಿಸಿದಂತೆ ತೆರೆದ ಅಂಗಳದಲ್ಲಿ ಚಾದರ ಹೊದ್ದು ಒರಗಿದ ಅವಳು ಗಾಢನಿದ್ರೆಯಲಿದ್ದಾಳೆ. ಅವಳ ಆಡುಗಳು, ಕುರಿಗಳು ಜೊತೆಜೊತೆಯಾಗಿ ಹೆಜ್ಜೆ ಹಾಕುತ್ತ ಮುಂದೆ ಓಡುತ್ತಿವೆ... ಅವಳು ಮುಗ್ಗರಿಸುತ್ತ, ಏಳುತ್ತ ಅವುಗಳನ್ನು ಹಿಂಬಾಲಿಸುತ್ತಿದ್ದಾಳೆ... ಅಷ್ಟರಲ್ಲಿ ಇದ್ದಕ್ಕಿದ್ದಂತೆ ಹಿಂಡನ್ನಗಲಿದ ಪುಟ್ಟಮರಿಯೊಂದನ್ನು ಕಾದು ಕುಳಿತ ಕತ್ತೆಕಿರುಬ ಗಬಕ್ಕನೆ ಹಿಡಿದು ಅದೇ ಕ್ಷಣ ಮಾಯವಾಗಿಬಿಟ್ಟಿದೆ. ಅವಳು ಆತಂಕಗೊಂಡಳು. ಇನ್ನು ತಡ ಮಾಡಿದರೆ ದೊಡ್ಡ ಸಿಂಹ ಬರಬಹುದು... ಇಲ್ಲ, ಸುಮ್ಮನೆ ಕಾಲ ಕಳೆಯುವಂತಿಲ್ಲ. ತನ್ನ ಸಂಗಾತಿಗಳಿಗೆ ಮೇವು ತಿನ್ನಿಸಿ, ಮನೆ ತಲುಪಿಸಿ ಹಾಲು ಕರೆಯುವ ಕಾಯಕ ಪ್ರಾರಂಭಿಸಬೇಕು... ಅಗೋ ಅಲ್ಲಿ ಯಾರೋ ನಿಂತಿದ್ದಾರೆ. ತೆಳ್ಳಗೆ ಉದ್ದನೆ ನಸುಗಪ್ಪು ಬಣ್ಣದ ಮನುಷ್ಯ. ಕೈಬೀಸಿ ತನ್ನನ್ನು ಕರೆಯುತ್ತಿದ್ದಾನೆ... ಅವನ ಹತ್ತಿರವೇ ಕೋಲಿಗೆ ಒರಗಿ ನಿಂತ ಬಿಳಿಗಡ್ಡದ ಮನುಷ್ಯನನ್ನು ತೋರಿಸಿ ಏನೋ ಹೇಳುತ್ತಿದ್ದಾನೆ?

ಅವನು ಏನು ಹೇಳುತ್ತಿದ್ದಾನೆ?

ಅವಳ ಕಣ್ಣಿಗೆ ಹತ್ತಿದ ನಿದ್ದೆಯ ಮಂಪರನ್ನು ಹಿಡಿದು ಅಲುಗಾಡಿಸಿದಂತೆ ಯಾರೋ ಅವಳ ಕಿವಿಯಲ್ಲಿ ಮೆತ್ತಗೆ ಉಸಿರುತ್ತಿದ್ದಾರೆ. ಏಳು ಮಗಳೇ ಏಳು... ಹಗಲು ಹುಟ್ಟುವ ಸಮಯವಾಗುತ್ತಿದೆ. ಹೋಗಬೇಕೆಂದು ಹೇಳಿದ್ದೆಯಲ್ಲ... ತಡವಾಗುವ ಮೊದಲೇ ಹೋಗಿಬಿಡು.

ಅವಳಿಗೆ ಎಚ್ಚರವಾಗಿಯೇ ಬಿಟ್ಟಿತು. ಹೌದು ತಾನೀಗ ಮನೆಬಿಟು ಹೋಗಬೇಕಾಗಿದೆ. ಅವಳು ಮೈಗಂಟಿದ್ದ ದಣಿವು, ಸುಸ್ತು ಬಳಲಿಕೆಗಳನ್ನು ಕೊಡವಿ ಎದ್ದು ಕುಳಿತಳು. ಅಂಗಳದಿಂದ ಮನೆಯ ಹೊಸ್ತಿಲಿನ ಮೇಲೆ ಕಾಲಿಟ್ಟಳು. ಎದ್ದು ನಿಲ್ಲಿಸಿದ ಕಟ್ಟಿಗೆ ಕಂಬಗಳ ಮೇಲೆ ಹುಲ್ಲು ಹೊದಿಸಿ ಸೂರು ಕಟ್ಟಿದ ಗೋಲಾಕಾರದ ಗುಡಿಸಲು ಅದು. ಅಲ್ಲಲ್ಲ... ಅಪ್ಪ, ಅಮ್ಮ, ಒಡಹುಟ್ಟಿದವರೊಂದಿಗೆ ಹದಿಮೂರು ವರ್ಷಗಳ ಕಾಲ ನೆರಳು ಹುಡುಕಿ ನೆಲೆಯೂರಿದ್ದಲ್ಲಿ ಆಸರೆ ನೀಡಿದ ಡೇರೆ ಎಂದರೆ ಸರಿಹೋದೀತೇನೋ. ಇನ್ನೇನು ಕೆಲವೇ ಕ್ಷಣಗಳಲ್ಲಿ ಅವಳ ನಿಜವಾದ ಬಾಳಪ್ರಯಾಣ ಪ್ರಾರಂಭವಾಗಲಿದೆ. ಲೆಕ್ಕಕ್ಕೆ ಬಾರದ ಮುಂದಿನ ಅನಿಶ್ಚಿತ ದಿನಗಳಿಂದಾಗಿ ಅವಳು ಬುತ್ತಿ ಕಟ್ಟಿ ಏನನ್ನು ಒಯ್ಯಬಹುದು? ಸುತ್ತ ಹರಿಸಿದ ಅವಳ ದೃಷ್ಟಿಗೆ ಹಾಲು, ಹಣ್ಣು, ಕೊನೆಗೆ ನೀರಾದರೂ ಕಾಣಬೇಕೆ? ಉಹೂಂ, ಅವಳ ಮದುವೆ ನಿಶ್ಚಯವಾದ ಈ ತಂದೆಯ ಮನೆಯಲ್ಲಿ ಗುಟುಕು ನೀರಿಗೂ ಗತಿಯಿಲ್ಲ!

ನಿನ್ನೆ ದಿನ ಅವಳ ತಂದೆ ಅವಳನ್ನು ಮಮತೆಯಿಂದ ಕರೆದು ಮಡಿಲಲ್ಲಿ ಕೂರಿಸಿ ಮೆದುವಾಗಿ ಮಾತು ಪ್ರಾರಂಭಿಸಿದಾಗಲೇ ಅವಳಿಗೆ ಸಂದೇಹ ಕಾಡತೊಡಗಿತ್ತು. ದರ್ಪದ ಸಾಕಾರಮೂರ್ತಿಯಾಗಿರುವ ಅವರು ಇದೇಕೆ ಹೀಗಿದ್ದಾರೆ?



ವಾರಿಸ್ ಡೇರಿ ಪ್ರಸಿದ್ಧ ರೂಪದರ್ಶಿ, ನಟಿ ಮತ್ತು ಲೇಖಕಿ. ಸೊಮಾಲಿಯಾದ ಅಲೆಮಾರಿ ದನಗಾಹಿ ಬುಡಕಟ್ಟಿನಲ್ಲಿ ಹುಟ್ಟಿ ಲಂಡನ್ ಸೇರಿ ರೂಪದರ್ಶಿಯಾಗಿದ್ದವರು.ಲೆವಿಸ್, ಲೋರಿಯಲ್, ರೆವಲಾನ್ ಮೊದಲಾದ ಜನಪ್ರಿಯ ಕಂಪನಿಗಳ ಸಿದ್ಧ ಉಡುಪು ಮತ್ತು ಪ್ರಸಾಧನ ಉತ್ಪನ್ನಗಳಿಗೆ ರೂಪದರ್ಶಿಯಾಗಿ, ಗ್ಲಾಮರ್, ವೋಗ್ ಮೊದಲಾದ ಪತ್ರಿಕೆಗಳ ಮುಖಪುಟದಲ್ಲಿ ಕಾಣಿಸಿಕೊಂಡು ಅಂತರಾಷ್ಟ್ರೀಯ ಮಟ್ಟದಲ್ಲಿ ಖ್ಯಾತಿ ಹೊಂದಿದವರು. 1997ರಲ್ಲಿ ಮಹಿಳಾ ಪತ್ರಿಕೆಯೊಂದರಲ್ಲಿ ಲೊರಾ ಜಿವ್‌ಗೆ ನೀಡಿದ ಸಂದರ್ಶನದಲ್ಲಿ ತಾನು ಬಾಲ್ಯದಲ್ಲಿ ಅನುಭವಿಸಿದ ಸುನ್ನತಿಯ ಕುರಿತು ಪ್ರಸ್ತಾಪಿಸಿದುದು ಅವರ ಬದುಕಿನ ದಾರಿಯನ್ನೇ ಬದಲಾಯಿಸಿಬಿಟ್ಟಿತು. ಅದುವರೆಗೆ ಯಾರ ಕಣ್ಣಿಗೂ ಬೀಳದಂತೆ ಆಫ್ರಿಕಾದ ಮಹಿಳೆಯರ ಮೇಲೆ ಮರೆಯಲ್ಲಿ ನಡೆಯುತ್ತಿದ್ದ ಈ ಬರ್ಬರ ಹಿಂಸಾತ್ಮಕ ಆಚರಣೆಯನ್ನು ಬೆಳಕಿಗೆ ತಂದ ವಾರಿಸ್ ಡೇರಿಗೆ ಇದನ್ನು ಉಚ್ಚಾಟಿಸಲು ನಡೆಸಿದ ಎಲ್ಲಾ ಪ್ರಯತ್ನಗಳಿಗೆ ಎಲ್ಲಾ ಕಡೆಯಿಂದಲೂ ಬೆಂಬಲ ದೊರೆಯಿತು. ಅವರು ತನ್ನ ವೃತ್ತಿಯನ್ನೇ ತೊರೆದು ಈ ಕಾರ್ಯಕ್ಕೆ ಸೊಂಟಕಟ್ಟಿ ನಿಂತರು. ಸ್ತ್ರೀ ಸುನ್ನತಿಯ ನಿಷೇಧ ಕಾರ್ಯದಲ್ಲಿ ವಿಶೇಷ ರಾಯಭಾರಿಯನ್ನಾಗಿ ಇವರನ್ನು ನಿಯೋಜಿಸಲಾಯಿತು. ಸ್ವತಃ ವಾರಿಸ್ ಡೇರಿಯೇ ಡೆಸರ್ಟ್ ಫ್ಲವರ್ ಫೌಂಡೇಶನ್ನನ್ನು ವಿಯೆನ್ನಾದಲ್ಲಿ ಸ್ಥಾಪಿಸಿ ಈ ಕಾರ್ಯದಲ್ಲಿ ನಿರತರಾಗಿದ್ದಾರೆ. ತಮ್ಮ ಕಟು ಅನುಭವದ ಕುರಿತು ಅವರು ಬರೆದ ಆತ್ಮ ಚರಿತ್ರೆ ಡೆಸರ್ಟ್ ಫ್ಲವರ್ ಮತ್ತು ಅವರ ಬದುಕನ್ನು ಆಧರಿಸಿದ ಇದೇ ಹೆಸರಿನ ಚಲನಚಿತ್ರ ಅತ್ಯಂತ ಜನಪ್ರಿಯವಾಗಿದೆ.

ಗಂಡಸಿನ ಹಾಗೆ ದುಡೀತಿಯಲ್ಲಮ್ಮಾ ಅಡುಕುರಿ ಮೇಯಿಸು, ಹಾಲು ಕರಿ, ಮನೆ ಕೆಲಸ ಮಾಡು... ಅಬ್ಬಬ್ಬಾ ನನಗಂತೂ ನಿನ್ನನ್ನು ಬಿಟ್ಟು ಇರುವುದು ಹೇಗೆಂದು ಆತಂಕ ಶುರುವಾಗಿಬಿಟ್ಟಿದೆ.

ಅಪ್ಪ ಯಾಕೆ ಹೀಗೆ ಮಾತನಾಡುತ್ತಿದ್ದಾರೆ? ನಾನು ಎಲ್ಲಿಗೆ ಹೋಗುವವಳಿದ್ದೇನೆ? ಅಪ್ಪನನ್ನು ತಬ್ಬಿಹಿಡಿದು ಲಲ್ಲೆಯಿಂದ ಅವಳು ಹೇಳಿದಳು, ನಿನ್ನನ್ನು ಬಿಟ್ಟು ನಾನು ಎಲ್ಲಿಗೂ ಹೋಗುವುದಿಲ್ಲಪ್ಪಾ.

ಇಲ್ಲಮ್ಮಾ, ನೀನು ಹೋಗುವ ಸಮಯ ಬಂದಿದೆ. ನಾನು ನಿನಗಾಗಿ ಗಂಡನ್ನು ಹುಡುಕಿದ್ದೇನೆ.

ನನಗೆ ಮದುವೆಯೇ? ಸಾಧ್ಯವೇ ಇಲ್ಲ. ನಾನು ಬೆಳೆದಿರುವುದೇ ಹೀಗೆ. ಯಾರಿಗೂ ಅಂಜದಂತೆ, ನನ್ನ ಮನಸ್ಸಿಗೆ ತಿಳಿದಂತೆ ಮಾಡುವ ರೀತಿಯಲ್ಲಿ. ಅವಳು ತಕ್ಷಣ ಉತ್ತರ ನೀಡಿದಳು, ಇಲ್ಲಪ್ಪಾ, ನಾನು ಮದುವೆಯಾಗಲಾರೆ.

ಮರುದಿನ ಮದುವೆ ಗಂಡನ್ನು ಅಪ್ಪ ತೋರಿಸಿದಾಗ ಅವಳಿಗೆ ಬವಳಿ ಬಂದ ಹಾಗಾಗಿತ್ತು. ಕೋಲು ಹಿಡಿದು ನಿಂತ ಬಿಳಿಗಡ್ಡದ ಅರವತ್ತು ವರ್ಷ ದಾಟಿದ ಮುದುಕ!

ಅಪ್ಪಾ ಅವನಿಗೆ ತುಂಬಾ ವಯಸ್ಸಾಗಿದೆಯಲ್ಲಾ?

ಒಳ್ಳೆಯದೇ ಆಯಿತಲ್ಲಾ. ಹೆಚ್ಚು ಓಡಾಡಲಾಗದ ಮನುಷ್ಯ ನಿನ್ನನು ಬಿಟ್ಟು ಹೋಗುವ ಪ್ರಶ್ನೆಯೇ ಇಲ್ಲವಲ್ಲ. ಚೆನ್ನಾಗಿ ನೋಡಿಕೊಳ್ಳುತ್ತಾನೆ, ಬಿಡು. ಮತ್ತೊಂದು ವಿಷಯ ಗೊತ್ತಾ, ಮಗಳೇ, ಅಳಿಯನಾದರೆ ನನಗೆ ಐದು ಒಂಟೆ ಕೊಡಿಸುತ್ತಾನಂತೆ!

ಮರುಭೂಮಿಯ ಬದುಕಿನಲ್ಲಿ ಒಂಟೆ ಹಾಲು ಸಮೃದ್ಧಿಯ ಸಂಕೇತ! ಅಪ್ಪ ಚೆನ್ನಾಗೇ ವ್ಯಾಪಾರ ಕುದುರಿಸಿದ. ಅವಳು ಅಮ್ಮನ ಬಳಿ ದೂರಿತ್ತಳು.

ಅಮ್ಮಾ, ನಾನು ಊರು ಬಿಟ್ಟು ಹೋಗುವವಳಿದ್ದೇನೆ.

ಮೆತ್ತಗೆ ಮಾತನಾಡು. ಎಲ್ಲಿಗೆ ಹೋಗ್ತೀಯ?

ಚಿಕ್ಕಮ್ಮನ ಮನೆಗೆ.

ಸರಿ, ಈಗ ಹೋಗಿ ನಿದ್ದೆ ಮಾಡು.

ಒಳ್ಳೆ ಅಮ್ಮ. ಮನೆ ಬಿಟ್ಟು ಹೋಗುವ ಮಗಳನ್ನು ಸರಿಯಾದ ಸಮಯಕ್ಕೆ ಎಬ್ಬಿಸಿ ಹೊರಡಿಸಿದ್ದಾಳೆ. ಗಳುವಿನ ಮೇಲಿದ್ದ ಅಂಗವಸ್ತ್ರವನ್ನು ತೆಗೆದು ಕುತ್ತಿಗೆಗೆ ಸುತ್ತಿ ಬರಿಗಾಲಿನಿಂದ ಹೊರಕಾಲಿಟ್ಟು ಮಗಳನ್ನು ಆ ತಾಯಿ ಒಮ್ಮೆ ಮಾತ್ರ ಕರೆದು ನಿಲ್ಲಿಸಿದಳು,

ಅವನು ಏಳುವ ಮೊದಲೇ ಹೋಗಿಬಿಡು. ಜಾಗ್ರತೆ. ಮಗೂ, ಒಂದು ಮಾತು, ಈ ಅಮ್ಮನನ್ನು ಮರೆಯುವುದಿಲ್ಲ ತಾನೇ?

ಅಳಬಾರದು, ತಾನು ದೃಢವಾಗಿ ಇರಬೇಕು ಎಂದುಕೊಂಡ ಮಗಳ ಕಣ್ಣಲ್ಲಿ ನೀರಾಡಿತು. ಗಂಟಲು ಕಟ್ಟಿಕೊಂಡಿತು. ಕತ್ತಲಲ್ಲಿ ಕರಗಿ ಹೋಗುವ ಮೊದಲು ಹಿಂತಿರುಗಿ ನೋಡದೆ ಅವಳುತ್ತರಿಸಿದಳು,

ಖಂಡಿತಾ ಇಲ್ಲ, ನನಗೆ ವಾರಿಸ್ ಎಂದು ಹೆಸರು ನೀಡಿದವಳು ನೀನು ತಾನೇ? ನಿನ್ನನ್ನು ಮರೆಯುವುದು ಸಾಧ್ಯವೇ ಇಲ್ಲ

ವಾರಿಸ್ ಅಂದರೆ ಏನರ್ಥ? ಸುಡುಬಿಸಿಲಿಗೆ ಕಾದು ಬೆಂಡಾದ ಮರುಭೂಮಿಗೆ ಮಳೆ ಸುರಿದು ತಂಪಾದಾಗ ನೆಲ ಚಿಗುರಿ ಅರಳುವ ಹೂ ವಾರಿಸ್! ಮರಳುಗಾಡಿನ ಕುಸುಮ. ಈ ವಾರಿಸ್ ಆಫ್ರಿಕಾ ಖಂಡದ ಸೋಮಾಲಿಯಾದ ಬುಡಕಟ್ಟು ಜನಾಂಗದ ಅಲೆಮಾರಿ ದನಗಾಹಿ ಕುಟುಂಬದ ಹೆಣ್ಣುಮಗಳು. ಆಫ್ರಿಕಾದ ಹೆಣ್ಣುಮಕ್ಕಳೇ ಹಾಗೆ, ರಟ್ಟೆ ಮುರಿದು ದುಡಿಯುವುದರಲ್ಲಿ ಗಂಡಿಗಿಂತ ಸಮರ್ಥರು. ಹಠಸಾಧನೆಯಲ್ಲಿ ಎಲ್ಲರನ್ನೂ ಮೀರಿಸುವವರು. ಉದಾಹರಣೆಗೆ ವಾರಿಸಳ ಅಮ್ಮನೇ ಇದ್ದಾಳಲ್ಲ. ಹಣ, ಅಧಿಕಾರವಿರುವ ತೌರು ಮನೆ ತೊರೆದು ಪ್ರೀತಿಸಿದವನಿಗಾಗಿ ಓಡಿ ಬಂದು ಮದುವೆಯಾದವಳು. ಇನ್ನು ವಾರಿಸಳ ಅಕ್ಕ ಅಮನ್ ಕೂಡಾ ಮನೆ ಬಿಟ್ಟು ಹೋಗಿ ಮದುವೆಯಾಗಿ ವರ್ಷಗಳೇ ಉರುಳಿವೆ. ಈಗ ವಾರಿಸಳ ಸರದಿ. ಓಡಿ ಬಂದ ಅವಳು



ಮೊಗದಿಶುವಿನಲ್ಲಿರುವ ಚಿಕ್ಕಮ್ಮನ ಮನೆ ಸೇರಬೇಕಾಗಿದೆ. ಮೊಗದೀಶು ಎಲ್ಲಿದೆ? ಅವಳಿಗೆ ಗೊತ್ತಿಲ್ಲ. ತಾನೀಗ ಯಾವ ದಿಕ್ಕಿಗೆ ಓಡುತ್ತಿದ್ದೇನೆ? ಅದೂ ಗೊತ್ತಿಲ್ಲ. ಕಾಲ ಕೆಳಗೆ ಕುಸಿಯುತ್ತಿರುವ ಮರಳು. ತಲೆಯ ಮೇಲೆ ಕತ್ತಲು ಹರಿದು ಕೆಂಪಾಗುತ್ತಿರುವ ಆಗಸ. ಗಂಟೆಗಳ ಪರಿವೆಇಲ್ಲದೇ ನೆತ್ತಿ ಸುಡುವ ಬಿಸಿಲು ಕಾದು ಕಾಡುವವರೆಗೆ ಓಡಿದ ಅವಳು ಗಿಡವೊಂದು ಕಾಣಿಸಿ ಅಲ್ಲಿಯೇ ಕುಸಿದು ಕುಳಿತಳು. ಹಸಿವಿನಿಂದ ತಾಳ ಹಾಕುತ್ತಿರುವ ಹೊಟ್ಟೆ. ಬಾಯಾರಿಕೆಯಿಂದ ಒಣಗಿದ ಗಂಟಲು. ಒಡೆದು ಛಿದ್ರವಾದ ಅಂಗಾಲು. ಅಷ್ಟರಲ್ಲಿ,

ವಾರಿಸ್, ವಾರಿಸ್, ಎಲ್ಲಿದ್ದೀ?

ಅಯ್ಯೋ ಅಪ್ಪ ಬಂದೇ ಬಿಟ್ಟರು! ಅವರ ಕರೆ ಎಲ್ಲಾ ದಿಕ್ಕಿನಲ್ಲಿ ಪ್ರತಿಧ್ವನಿಯಾಗಿ ಕೇಳಿ ಬರುತ್ತಿದೆ. ನನ್ನನ್ನು ಮತ್ತೆ ಆ ನರಕಕ್ಕೆ ಕರೆದೊಯ್ಯುವುದು ಖಂಡಿತಾ. ಅವಳು ಎದ್ದು ನಿಂತಳು. ಬಳಲಿದ ಕಾಲುಗಳ ಶಕ್ತಿ ಉಡುಗಿ ಕುಸಿದು ಬಿದ್ದಳು. ಈಗ ಅಲ್ಲದಿದ್ದರೆ ಯಾವಾಗೂ ಅಲ್ಲವೆಂಬ ನಿರ್ಧಾರ ಅವಳನ್ನು ಎತ್ತಿ ನಿಲ್ಲಿಸಿತು. ಓಡಲು ಪ್ರೇರೇಪಿಸಿತು. ಅವಳು ಮತ್ತೆ ಓಡಲು ಪ್ರಾರಂಭಿಸಿದಳು. ಹಿಂದೆ ಅಪ್ಪ. ಮುಂದೆ ಮಗಳು. ಸಾಗರದ ಅಲೆಯಂತೆ ಉಬ್ಬರ ಇಳಿತಗಳಲ್ಲಿ ಅವರ ಓಟ ಸಾಗಿತು. ಕೊನೆಗೊಮ್ಮೆ ಅಪ್ಪನ ಧ್ವನಿ ಅಡಗಿತು. ಮಗಳು ಗೆದ್ದುಬಿಟ್ಟಳು. ದಣಿವಾಗಿ ಮರದ ಬೊಡ್ಡೆಯೊಂದಕ್ಕೆ ಒರಗಿದವಳಿಗೆ ಗಾಢನಿದ್ದೆ ಆವರಿಸಿತು. ಸಮಯ ಕಳೆದದ್ದು ಗೊತ್ತಾಗಲೇ ಇಲ್ಲ. ಏನೋ ಸಣ್ಣಗಿನ ಸದ್ದು, ಯಾರೋ ಹತ್ತಿರ ಸುಳಿದಂತೆ. ತನ್ನನ್ನೇ ನೋಡುತ್ತಿರುವಂತೆ. ವಾರಿಸ್ ಕಣ್ಣು ಬಿಟ್ಟಳು. ಉದ್ದ ಕೇಸರವನ್ನು ಇಳಿಬಿಟ್ಟ ದೊಡ್ಡ ಸಿಂಹವೊಂದು ಕುಳಿತು ಅವಳನ್ನೇ ದಿಟ್ಟಿಸಿ ನೋಡುತ್ತಿದೆ! ಅವಳಿಗೆ ಭಯವೆನಿಸಲಿಲ್ಲ. ಹಸಿವು, ದಣಿವಿನಿಂದ ಸೋತು ಬಸವಳಿದ ಅವಳ ದೇಹ ಬಿಡುಗಡೆಯನ್ನು ಬಯಸಿತು. ಬಾ, ನನ್ನನ್ನು ತಿಂದುಬಿಡು, ಜನರಹಿತ ಮರುಭೂಮಿಯಲ್ಲಿ ಕಂಡ ಈ ಏಕಾಂಗಿಯನ್ನು ಅವಳು ಸ್ವಾಗತಿಸಿದಳು. ಬಾಯಿ ಹಾಕಿದರೆ ತುಣುಕು ಮಾಂಸ ಕೂಡಾ ಸಿಗದ ಈ ಪುಟ್ಟ ಪ್ರಾಣಿಯಲ್ಲಿ ತನಗೆ ಆಸಕ್ತಿ ಇಲ್ಲವೆಂಬಂತೆ ನಾಲಗೆಯಾಡಿಸುತ್ತಾ ಆ ಸಿಂಹ ಹೊರಟೇ ಹೋಯಿತು. ಅಂದರೆ ತಾನು ಬದುಕುಳಿಯ



ಬೇಕೆಂದು ದೈವ ನಿರ್ಧರಿಸಿದೆ ಎಂದಾಯ್ತು. ದೇವರೇ, ತಾನು ಯಾವ ಮಹಾತ್ಕಾರ್ಯವನ್ನು ಸಾಧಿಸುವವಳಿದ್ದೇನೆ?

ಆಫ್ರಿಕಾದ ಹೆಂಗಸಿನಿಂದ ಯಾವ ಮಹಾತ್ಕಾರ್ಯ ನಡೆಯುವುದು ಸಾಧ್ಯವಿದೆ? ಅದರಲ್ಲಿಯೂ ಸೋಮಾಲಿಯಾದ ಅಲೆಮಾರಿ ಸಂಸ್ಕೃತಿಯಲ್ಲಿ ಹೆಣ್ಣಿಗೆ ಮದುವೆಯಾಗದೇ ಮನೆಯಲ್ಲಿ, ಸಮಾಜದಲ್ಲಿ ಸ್ಥಾನಮಾನ ಇಲ್ಲವೇ ಇಲ್ಲ. ಮೈನೆರೆಯುವ ಮೊದಲೇ ಮಗಳನ್ನು ಮದುವೆ ಮಾಡಿಕೊಟ್ಟು ಮಾಡಿಸಿಕೊಟ್ಟ ತಂದೆತಾಯಿ ತಮ್ಮನ್ನು ಧನ್ಯರೆಂದು ತಿಳಿಯುತ್ತಾರೆ. ಮದುವೆಯಾಗು, ಮಕ್ಕಳನ್ನು ಹೆರು,ಇಡೀ ದಿನ ಮನೆಗೆಲಸ ಮಾಡಿ ಜೀವನ ಕಳಿ. ಆದರೆ, ಎಲ್ಲಕ್ಕಿಂತ ಮೊದಲು ಮದುವೆ ಮಾರುಕಟ್ಟೆಯಲ್ಲಿ ಬಿಕರಿಯಾಗಲು ಅವಳಿಗೆ ಅರ್ಹತೆ ಇರಬೇಕಲ್ಲ. ಈ ಅರ್ಹತೆಯಾದರೂ ಏನು? ಅದು ನೆನಪಾಗುತ್ತಲೇ ವಾರಿಸ್ ನಡುಗಿಬಿಟ್ಟಳು. ಹೆಂಗಸರೆಂದರೆ ಹೊಲಸು, ಅತಿಕಾಮಿ ಅವಳು. ಅವಳ ತೊಡೆಗಳ ನಡುವೆ ಕುರೂಪಿ ವಿಷಯ ಅಡಗಿದೆ. ಅವುಗಳನ್ನು ಕಿತ್ತು ಬಿಸಾಡದೇ ಅವಳು ಪರಿಶುದ್ಧಳೆನಿಸುವಂತಿಲ್ಲ, ಮದುವೆಗೆ ಅರ್ಹಳಾಗುವುದಿಲ್ಲ. ಒಂದೊಂದು ಸಂಸ್ಕೃತಿಯಲ್ಲಿ ಒಂದೊಂದು ವಿರೂಪಗಳು. ಎಲ್ಲವೂ ಮಹಿಳೆಯರಿಗೆ ಸಂಬಂಧಪಟ್ಟವುಗಳೇ, ಹಾಗೆ ಸೋಮಾಲಿಯಾದಲ್ಲಿ ಕೂಡಾ ಇರುವಂತಹದು ಸ್ತ್ರೀ ಸುನ್ನತಿ.

ಮದುವೆ ನಿರಾಕರಿಸಿ ಹೊರಟು ಬಂದ ವಾರಿಸಳಿಗೆ ತನ್ನ ದೇಹದ ಮೇಲೆ ನಡೆದ ಈ ಅತಿಕ್ರಮಣದ ದಿನಗಳು ಚನ್ನಾಗಿ ನೆನಪಿದೆ. ಬೆಳೆದ ಹೆಣ್ಣುಮಕ್ಕಳ ದೇಹದ ಮೇಲೆ ನಡೆಸಬೇಕಾದ ಈ ಪದ್ಧತಿ ಕ್ರಮೇಣ ಪುಟ್ಟ ಹುಡುಗಿಯರನ್ನು ಆಕ್ರಮಿಸಿ ಬಲಿ ತೆಗೆದುಕೊಳ್ಳುತ್ತಿರುವುದು ನಿಜವಾಗಿಯೂ ದುರಂತವಲ್ಲದೇ ಮತ್ತಿನ್ನೇನು? ಅವೈಜ್ಞಾನಿಕ ಸುನ್ನತಿಯಿಂದ ನಂಜಾಗಿ ವಿಷವೇರಿ ಸತ್ತುಹೋದವರು ಅದೆಷ್ಟೋ ಮಂದಿ ಹುಡುಗಿಯರು. ಹೀಗೆ ಸತ್ತವರು ಪುಣ್ಯ ಮಾಡಿದ್ದಾರೆ ಎಂದುಕೊಳ್ಳುವ ಹುಡುಗಿಯರಿಗೇನೂ ಕಮ್ಮಿಯಿಲ್ಲ. ಯಾಕೆಂದರೆ ಜೀವನ ಪೂರ್ತಿ ವಾಸಿಯಾಗದ ನೋವಿನ ಬುತ್ತಿಯನ್ನು ಹೊತ್ತು ಸಾಗಬೇಕಲ್ಲಾ? ತಿಂಗಳಲ್ಲಿ ಇಪ್ಪತ್ತು ದಿನ ಹಾಯಾಗಿದ್ದರೆ ಹತ್ತು ದಿನ ನರಕದ ದರ್ಶನ ತಪ್ಪಿದ್ದಲ್ಲ. ಸುನ್ನತಿಯ ಕಿಂಚಿತ್ತೂ ಸುಳಿವು ಸಿಕ್ಕಿದರೂ ಅದರಿಂದ ತಪ್ಪಿಸಬಹುದಿತ್ತು, ಆದರೆ ಹುಡುಗಿಯರಿಗೆ ಅದನ್ನು ಮುಂದಾಗಿ ತಿಳಿಸಿದವರುಂಟೇ?

ಮರುಭೂಮಿಯಲ್ಲಿ ದಿಕ್ಕು ದೆಸೆ ಅರಿಯದೇ ಒಂಟಿಯಾಗಿ ಓಡುತ್ತಿರುವ ವಾರಿಸಳ ಮುಂದೆ ಬಾಲ್ಯದ ಆ ಕಹಿ ನೆನಪು ಮರುಕಳಿಸಿತು. ಆ ದಾರುಣ ದಿನ ಕಾಣಿಸಿಕೊಳ್ಳುವವರೆಗೆ ಎಲ್ಲಾ ಮಕ್ಕಳಂತೆ ಅವಳ ಬಾಲ್ಯ ಕೂಡಾ ಸುಂದರವಾಗಿತ್ತು. ಓರಗೆಯವರೊಂದಿಗೆ ಹಾಡು ಹೇಳುತ್ತಾ ಬೀಸುವ ಗಾಳಿ ತಂದ ಸುಗಂಧವನ್ನು ಹೀರಿಕೊಳ್ಳುತ್ತಾ ಪುಟ್ಟ ಪ್ರಾಣಿಗಳನ್ನು ಅಟ್ಟಿಸಿಕೊಂಡು ಹೋಗುತ್ತಿದ್ದ ನಿರಾತಂಕದ ದಿನಗಳು. ಒಂದು ದಿನ ಇದ್ದಕ್ಕಿದ್ದಂತೆ ಅಮ್ಮ ಅವಳನ್ನು ತಡೆದು ಹೇಳಿದರು,

ಅಪ್ಪನಿಗೆ ಜಿಪ್ಸಿ ಹೆಂಗ್ಸು ಭೇಟಿಯಾಗಿದ್ದಾಳೆ. ಅವಳು ಇಲ್ಲಿಗೆ ಇವತ್ತೋ ನಾಳೆಯೋ ಬರಬಹುದು. ಮನೆಯಲ್ಲಿಯೇ ಇರು.

ಅಪ್ಪ ಜಿಪ್ಸಿ ಹೆಂಗಸನ್ನು ಭೇಟಿಯಾದದ್ದು ಯಾಕೆ? ಅವಳನ್ನು ಮನೆಗೆ ಕರೆತರುವುದು ಯಾಕೆ? ಅವಳು ನಾಳೆ ಬರುವಳೆಂದು ನನಗೆ ವಿಶೇಷ ಊಟ ಬಡಿಸಿದ್ದು ಯಾಕೆ? ನೀರು ಕುಡಿ, ಹಾಲು ಕುಡಿ ಅಂತ ಅಮ್ಮ ಒತಾಯಿಸುತ್ತಿರುವುದು ಯಾಕೆ? ವಾರಿಸಳ ಈ ಯಾಕೆಗಳ ಸರಮಾಲೆಗಳಿಗೆ ಉತ್ತರ ಸಿಗುವುದಕ್ಕೆ ತಡವಾಗಲಿಲ್ಲ. ನಿನ್ನೆ ಅಮ್ಮ ನಿದ್ದೆಯಲ್ಲಿ ಇದ್ದವಳನ್ನು ಎಬ್ಬಿಸಿ ಮನೆ ಬಾಗಿಲು ತೆರೆದು ಹೋಗು ಎಂದು ಹೇಳಿದಳಲ್ಲಾ, ಅದೇ ರೀತಿ ಆ ದಿನ ಕೂಡಾ ನಿದ್ದೆಯಲ್ಲಿದ್ದವಳನ್ನು ಎಬ್ಬಿಸಿದಳು. ಮನೆ ಬಾಗಿಲು ತೆರೆದಳು. ಆದರೆ ಮಗಳನ್ನು ಒಂಟಿಯಾಗಿ ಬಿಡಲಿಲ್ಲ. ಅವಳ ಕೈಹಿಡಿದು ತಾನು ಕೂಡಾ ಮನೆಯಿಂದ ಹೊರಬಂದು ಪೊದೆಯೊಂದರ ಬಳಿ ನಿಂತು ಜಿಪ್ಸಿ ಹೆಂಗಸಿನ ದಾರಿ ಕಾದಳು. ನಸುಕು ಹರಿಯುವ ಮುನ್ನವೇ ಆ ಹೆಂಗಸು ಬಂದಳು. ಮಾತಿಲ್ಲ, ಕಥೆಯಿಲ್ಲ, ಬಂಡೆಯೊಂದರ ಮೇಲೆ ಕುಳಿತುಕೊಳ್ಳುವಂತೆ ಸನ್ನೆ ಮಾಡಿದಳು. ಹೆದರಿಕೊಂಡೆ ಮರಗಟ್ಟಿ ಹೋಗಿದ್ದ ಐದು ವರ್ಷದ ಬಾಲೆ ವಾರಿಸ್ ಮಾತನಾಡುವ ಸ್ಥಿತಿಯಲ್ಲಿ ಇರಲಿಲ್ಲ. ಅವಳ ಹಿಂದೆ ಕುಳಿತ ಅಮ್ಮ ಅವಳ ತಲೆಯನ್ನು ಎದೆಗೊತ್ತಿಕೊಂಡಳು, ಮೊಣಕಾಲುಗಳನ್ನು ತನ್ನ ಕಾಲಿಂದ ಸುತ್ತಿ ಹಿಡಿದಳು. ಹಲ್ಲಿನ ನಡುವೆ ಕಚ್ಚಿ ಹಿಡಿಯಲು ಒಂದು ಬೇರನ್ನು ನೀಡಿದಳು. ಓ ಇದು ಖಂಡಿತಾ ನೋವು ಉಂಟು ಮಾಡುತ್ತದೆ! ಕಚ್ಚಿ ಹಿಡಿದ ಬೇರಿನ ನಡುವೆ ಮಗಳು ಪಿಸುಗುಟ್ಟಿದಳು. ಅಮ್ಮ ಅದೇ ಧ್ವನಿಯಲ್ಲಿ ಉತ್ತರ ನೀಡಿದಳು.

ಒಳ್ಳೆ ಹುಡುಗಿಯಪ್ಪಾ ನೀನು. ಅಮ್ಮನಿಗಾಗಿ ಧೈರ್ಯ ತಂದುಕೋ ಮಗಾ, ಬೇಗನೇ ಮುಗಿದುಬಿಡುತ್ತೆ.

ಬಾಯಿ ತೆರೆಯಲಾಗದ ವಾರಿಸ್ ಕಣ್ಣು ಬಿಟ್ಟು ನೋಡಿದಳು. ಜಿಪ್ಸಿ ಹೆಂಗಸು ತನ್ನ ಭಾವರಹಿತ ಕಣ್ಣುಗಳಿಂದ ಅವಳನ್ನೇ ನೋಡುತ್ತಿದ್ದಾಳೆ. ಅವಳ ನೀಳ ಬೆರಳುಗಳು ಹಳೇ ಚೀಲವನ್ನು ತಡಕಾಡುತ್ತಿವೆ. ಅವಳು ಹುಡುಕುತ್ತಿದ್ದುದು ಕೊನೆಗೂ ಸಿಕ್ಕಿಬಿಟ್ಟಿತು. ಮುರಿದ ಬ್ಲೇಡಿನ ತುಂಡು! ಅದರ ಅಂಚಿನುದ್ದಕ್ಕೂ ಒಣಗಿದ ರಕ್ತದ ಕಲೆಗಳು. ಅವಳು ಎಂಜಲು ಉಗುಳಿ ಆ ಕಲೆಗಳನ್ನು ಒರೆಸಿ ತೆಗೆದಳು. ನಂತರ ಬಂಡೆಗೆ ತಿಕ್ಕಿ ಬ್ಲೇಡಿನ ಅಂಚನ್ನು ಹರಿಗೊಳಿಸುವ ಕಾರ್ಯದಲ್ಲಿ ಮಗ್ನಳಾದಳು. ಅದನ್ನೇ ನೋಡುತ್ತಿದ್ದ ವಾರಿಸಳಿಗೆ ಇದ್ದಕ್ಕಿದ್ದಂತೆ ಕಣ್ಣಿಗೆ ಕತ್ತಲೆ ಕವಿದಂತಾಯಿತು. ಅಮ್ಮ ಅವಳ ಕಣ್ಣಿಗೆ ಬಟ್ಟೆ ಕಟ್ಟಿಬಿಟ್ಟಿದ್ದಾಳೆ, ನೋಡಬಾರದ್ದನ್ನು ಅವಳು ನೋಡುವುದು ಬೇಡವೆಂದು! ಆದರೆ ಅವಳ ಯಮಯಾತನೆಗೆ ಕಟ್ಟು ಕಟ್ಟುವುದು ಸಾಧ್ಯವಿತ್ತೆ? ಮತ್ತೆ ಮತ್ತೆ ದೇಹದ ಮೇಲೆ ಬಂದೆರಗುತ್ತಿದ್ದ ಬ್ಲೇಡಿನ ತುಂಡು ಅವಳ ಗುಪ್ತಾಂಗವನ್ನು ತುಂಡುತುಂಡಾಗಿ ಕತ್ತರಿಸುತ್ತಿದ್ದಂತೆ, ನಾನೀಗ ಅಲುಗಾಡಬಾರದು. ಒಂದು ವೇಳೆ ಹಾಗೇನಾದರೂ ಮಾಡಿದರೆ ಇದು ಮುಗಿಯದ ಕತೆಯಾಗಬಹುದು ಎಂಬ ಜ್ಞಾನ ಈ ಐದುವರ್ಷದ ಬಾಲೆಯಲ್ಲಿಯೂ ಇತ್ತು. ಆದರೆ ಅವಳ ಕಾಲುಗಳು ಕೇಳಬೇಕಲ್ಲ, ನಿಯಂತ್ರಣ ತಪ್ಪಿ ಅವು ನಡುಗಲಾರಂಭಿಸಿದವು. ಅವಳು ದೇವರಿಗೆ ಮೊರೆಯಿಟ್ಟಳು, ದಯವಿಟ್ಟು ಇದು ಬೇಗ ಮುಗಿಯುವಂತೆ ಮಾಡು ತಂದೆ! ಅವಳ ಬೇಡಿಕೆ ಹುಸಿಯಾಗಲಿಲ್ಲ. ಅವಳಿಗೆ ಪ್ರಜ್ಞೆ ತಪ್ಪಿತು. ಎಚ್ಚರವಾದಾಗ ಜಿಪ್ಸಿ ಹೆಂಗಸು ಗಿಡದ ಮುಳ್ಳಿನಿಂದ ಅವಳ ಗಾಯದ ಅಂಚಿನ ಮೇಲೆ ತೂತು ಕೊರೆದು ಬಿಳಿ ದಾರದಿಂದ ಹೊಲಿಗೆ ಹಾಕುತ್ತಿದ್ದಳು. ಅವಳ ಎರಡೂ ಕಾಲುಗಳು ಜೀವವಿಲ್ಲದ ಮರದ ಕೊರಡಿನಂತಾಗಿವೆ. ಆದರೆ ಅವುಗಳ ನಡುವೆ ಎದ್ದೆದ್ದು ಬರುತ್ತಿರುವ ನೋವಿನ ತೀವ್ರತೆಗೆ ಸಾವಾದರೂ ಬರಬಾರದೇ ಎನ್ನುವಂತಾಗಿದೆ ಅವಳಿಗೆ. ಮತ್ತೊಮ್ಮೆ



ಪ್ರಜ್ಞೆ ತಪ್ಪಿತು. ಸರಿಯಾಗಿ ಎಚ್ಚರವಾದಾಗ ನೆಲದಲ್ಲಿ ಮಲಗಿಸಿದ ಅವಳ ಎರಡೂ ಕಾಲುಗಳನ್ನು ಮೊಣಕಾಲಿನಿಂದ ತೊಡೆಯವರೆಗೆ ಬಟ್ಟೆಯಿಂದ ಬಿಗಿಯಾಗಿ ಕಟ್ಟಿರುವುದು ಅವಳಿಗೆ ತಿಳಿಯಿತು. ಕತ್ತು ತಿರುಗಿಸಿ ನೋಡಿದಾಗ ಮೊದಲು ಕುಳಿತಿದ್ದ ಬಂಡೆಯ ಮೇಲೆ ರಕ್ತದ ಕಲೆಗಳು ಕಂಡವು. ಯಾವುದೋ ಪ್ರಾಣಿಯನ್ನು ಅಲ್ಲಿ ತುಂಡರಿಸಿದಂತೆ. ಅಲ್ಲಿ ಅವಳ ದೇಹದ ಕೆಲವು ಮಾಂಸದ ತುಣುಕುಗಳು ಕೂಡಾ ಇದ್ದವು. ಬಿಸಿಲಿಗೆ ಅವುಗಳನ್ನು ಒಣಗಿಸಲು ಹಾಕಿದಂತೆ! ಜಿಪ್ಸಿ ಹೆಂಗಸು ಇಲ್ಲ, ವ್ಯವಹಾರ ಮುಗಿಸಿ ಹೋಗಿಬಿಟ್ಟಿದ್ದಾಳೆ. ಅಂಗಳದ ಪೊದೆಯ ಸಮೀಪ ವಾರಿಸಳಿಗಾಗಿ ಅವಳ ತಮ್ಮ ಮತ್ತು ಅಕ್ಕ ಸೇರಿ ಒಂದು ಗುಡಿಸಲನ್ನು ಕಟ್ಟಿ ನಿಲ್ಲಿಸಿದ್ದಾರೆ. ಇನ್ನು ಮುಂದೆ ಅವಳು ಕೆಲವು ವಾರಗಳನ್ನು ಅಲ್ಲಿಯೇ ಕಳೆಯಬೇಕಾಗಿದೆ. ಅದು ಸಂಪ್ರದಾಯ. ಕಟ್ಟಿದ ಕಾಲುಗಳನ್ನು ಬಿಚ್ಚುವಂತಿಲ್ಲ. ಮೂತ್ರ ಮಾಡಬೇಕಾದರೆ ಹೊರಳಿಕೊಳ್ಳಬೇಕು. ಅದೂ ಎಂತಹ ಕ್ರೂರ ಅನುಭವ! ದೇಹದಿಂದ ತೊಟ್ಟುತೊಟ್ಟಾಗಿ ಆಮ್ಲ ಹೊರಬಂದ ಹಾಗೆ. ಸಹಿಸಲಾಗದ ಉರಿ, ನೋವು. ಇದೆಲ್ಲಾ ಯಾಕಾಗಿ? ಯಾಕೆ? ಆಗ ಲೈಂಗಿಕತೆಯ ಕುರಿತು ತಿಳಿದುಕೊಳ್ಳುವ ವಯಸ್ಸು ಅವಳದ್ದಾಗಿರಲಿಲ್ಲ. ಆದರೆ ತನ್ನಮೇಲೆ ನಡೆದ ಈ ಕಸಾಯಿ ಕಾರ್ಯಕ್ಕೆ ತನ್ನಮ್ಮನ ಅನುಮತಿ ಇತ್ತು ಎಂಬುದಷ್ಟೇ ಅವಳಿಗೆ ಆಗ ಗೊತ್ತಾಗಿದ್ದು!

* * *

ಮರುಭೂಮಿಯ ಪ್ರಯಾಣ ಮುಗಿದು ವಾರಗಟ್ಟಲೆ ಊರೂರು ಅಲೆದು ಅವಳು ಮೊಗದಿಶು ತಲುಪಿದಾಗ ಅವಳನ್ನು ನೋಡಿದ ಅಕ್ಕ ಅಮನಳಿಗೆ ಕನಸು ಕಾಣುತ್ತಿರುವ ಭ್ರಮೆ ಮೂಡಿತು, ವಾರಿಸ್! ನೀನು ಇಲ್ಲಿ! ಅದು ಕನಸಾಗದೆ ವಾಸ್ತವವಾಗಿತ್ತು. ನಿಲ್ಲಲು ನೆಲೆ ದೊರೆಯಿತು. ಆದರೆ ಅಲ್ಲಿಂದಲೇ ವಾರಿಸಳ ಮನೆಚಾಕರಿ ಬದುಕು ಪ್ರಾರಂಭವಾಯಿತು. ಕಸ ಗುಡಿಸು, ಬಟ್ಟೆ ಒಗೆ, ಮಾರ್ಕೆಟ್‌ಗೆ ಹೋಗಿ ತರಕಾರಿ ತಾ, ಮಗುವನ್ನು ನೋಡಿಕೋ.. ಮೊದಲು ಅಕ್ಕನ ಮನೆ. ನಂತರ ಚಿಕ್ಕಮ್ಮನ ಮನೆ. ಆಮೇಲೆ ರಾಯಭಾರಿಯಾಗಿದ್ದ ಚಿಕ್ಕಪ್ಪನೊಂದಿಗೆ ಲಂಡನ್ ಪ್ರವಾಸ. ಲಂಡನ್‌ನಲ್ಲಿ ಅವಳ ಅದೃಷ್ಟ ಚಿಗುರಿತು. ಕ್ಯಾಮರಾ ಕಣ್ಣಿಗೆ ಅಪೂರ್ವ ಸುಂದರಿಯಾಗಿ ಕಾಣುವ ಅವಳು ರೂಪದರ್ಶಿಯಾಗಿ ಗಮನ ಸೆಳೆದಳು. ಪ್ರಸಿದ್ಧ ಪತ್ರಿಕೆಗಳ ಮುಖಪುಟಗಳಲ್ಲಿ ರಾರಾಜಿಸಿದಳು. ಹಂತಹಂತವಾಗಿ ಮೇಲೇರುತ್ತಾ ಹೋದಳು. ನೋಡುವವರ ಕಣ್ಣಿಗೆ ನಗುಮೊಗದ ಲೋಕಸುಂದರಿ. ಆದರೆ ಆಂತರಿಕವಾಗಿ ಅವಳು ನೋವನ್ನುಣ್ಣುವ ಸಾಮಾನ್ಯ ಹೆಂಗಸು. ಮೂತ್ರ ತೊಟ್ಟುತೊಟ್ಟಾಗಿ ಹನಿಗರೆಯಬೇಕಾದರೆ ಅರ್ಧ ಗಂಟೆ ಕಾಯಬೇಕು. ಮುಟ್ಟಾದಾಗಲಂತೂ ಹೇಳುವುದೇ ಬೇಡ. ಜಿಪ್ಸಿ ಹೆಂಗಸು ಹಾಕಿದ ಹೊಲಿಗೆ ದ್ರವಕ್ಕೆ ಕೂಡಾ ಅವಕಾಶ ನೀಡದಷ್ಟು ಬಿಗಿದುಕೊಂಡಿದೆ. ನೋವು. ಶಮನಕಾರಿ ಗುಳಿಗೆ ನೀಡುವ ವೈದ್ಯರಲ್ಲಿ ತನ್ನ ಸಮಸ್ಯೆಯನ್ನು ಹೇಳುವುದು ವಾರಿಸಳಿಗೆ ಕಷ್ಟವಾಗಿದೆ. ಕೊನೆಗೂ ಸಹೃದಯೀ ವೈದ್ಯರೊಬ್ಬರು ಸಿಕ್ಕಿಯೇ ಬಿಟ್ಟರು! ಅವಳಿಗಾದ ಸಂತೋಷಕ್ಕೆ ಮೇರೆಯೇ ಇಲ್ಲ. ಆದರೆ ಸೋಮಾಲಿಯಾದ ಸಂಪ್ರದಾಯದ ವಿರುದ್ಧ ಅವಳು ಹೋಗುವಂತಿರಲಿಲ್ಲ. ಮತ್ತೆ ಶಸ್ತ್ರಚಿಕಿತ್ಸೆ ಮಾಡುವುದಾದರೆ ಮನೆಯವರ ಒಪ್ಪಿಗೆ ಕಡ್ಡಾಯ! ಆದರೆ ನುರಿತ ಅನುಭವೀ ವೈದ್ಯರಿಂದ ಅವಳಿಗೆ ಆಶ್ವಾಸನೆಯ ಮಹಾಪೂರವೇ ಹರಿದು ಬಂತು.

ಈ ಸಮಸ್ಯೆ ನಿನ್ನೊಬ್ಬಳದ್ದು ಅಲ್ಲ. ಸೂಡಾನ್, ಈಜಿಪ್ಟ್, ಸೊಮಾಲಿಯಾದಿಂದ ಎಷ್ಟೋ ಹೆಂಗಸರು ಬಂದು ನನ್ನನ್ನು ಕಂಡಿದ್ದಾರೆ. ಅವರಲ್ಲಿ ಕೆಲವರಂತೂ ಆತಂಕ ತುಂಬಿಕೊಂಡಿದ್ದ ಗರ್ಭವತಿಯರು ಬೇರೆ. ಗಂಡನ ಅನುಮತಿ ಇಲ್ಲದೆ ಬರುವವರೇ ಜಾಸ್ತಿ. ಅವರಿಗೆಲ್ಲಾ ನನ್ನ ಕೈಲಾದಷ್ಟು ಸಹಾಯ ನಾನು ಮಾಡಿದ್ದೇನೆ.

ವಾರಿಸಳಿಗೆ ಸ್ವರ್ಗ ಕೈಗೆಟಕಿದಷ್ಟು ಸಂತೋಷವಾಯಿತು. ಚಿಕಿತ್ಸೆ ನಡೆದು ಗುಣಮುಖಳಾದ ನಂತರ ತಾನು ಕಂಡುಕೊಂಡ ಸ್ವಾತಂತ್ರ್ಯವನ್ನು ಬಣ್ಣಿಸಲು ಅವಳಿಗೆ ಮಾತುಗಳೇ ಸಿಗಲಿಲ್ಲ. ನಂತರ ಅವಳು ಅಮ್ಮನನ್ನು ಹುಡುಕಿ ತೆಗೆದಳು, ಆಮೇಲೆ ತನ್ನ ಬಾಳಸಂಗಾತಿಯನ್ನು ಆರಿಸಿದಳು. ಗಂಡುಮಗುವಿನ ತಾಯಿಯಾದಳು. ಜಗತ್ಪ್ರಸಿದ್ಧ ರೂಪದರ್ಶಿಯಾದಳು. ಆದರೆ ಅವಳ ಕಣ್ಣಮುಂದೆ ಸದಾ ಕಾಣಿಸುತ್ತಿದ್ದುದು ಅವಳ ಊರಿನ ದೃಶ್ಯಗಳೇ. ತಿಂಗಳ ನೋವಿನಿಂದ ಎದ್ದು ನಿಲ್ಲಲಾರದಷ್ಟು ಬಲಹೀನಳಾಗಿದ್ದೂ ಕುರಿಮಂದೆಯನ್ನು ಮೇಯಿಸುತ್ತಾ ಗುಡ್ಡ ಹತ್ತಿ ಹೋಗುವ ಹೆಣ್ಣುಮಗಳು ಅಥವಾ ಗರ್ಭಿಣಿಯಾಗಿದ್ದು, ಉಪವಾಸವಿರುವ ತನ್ನ ಮಕ್ಕಳಿಗಾಗಿ ಮರುಭೂಮಿಯಲ್ಲಿ ಆಹಾರ ಹುಡುಕುತ್ತಿರುವ ಹೆಂಗಸು. ಒಳಗಿನ ಒತ್ತಡ ತಡೆಯಲಾಗದೇ ಒಂದು ದಿನ ಅವಳು ಬಾಯಿಬಿಡುವ ಪ್ರಸಂಗ ಬಂದೇ ಬಿಟ್ಟಿತು. ಪ್ರಸಿದ್ಧ ಪತ್ರಿಕೆಯೊಂದಕ್ಕೆ ಅವಳ ಸಂದರ್ಶನ ಬೇಕಿತ್ತು. ನಾನು ರೂಪದರ್ಶಿ ಯಾದ ಹಿನ್ನಲೆ ಸಾವಿರ ಬಾರಿ ಹೇಳಿಬಿಟ್ಟಿದ್ದೀನಿ. ನಿಜವಾದ ಕತೆ ಹೇಳಿದರೆ ಪ್ರಕಟ ಮಾಡುವಿರೇನು? ಅವಳಿಗೆ ಸಲೀಸಾಗಿ ಒಪ್ಪಿಗೆ ದೊರೆಯಿತು. ಆ ದಿಕ್ಕಿನತ್ತ ಅವಳ ಯೋಚನೆ ಹರಿಯಲಾರಂಭಿಸಿತು.

ನಾನು ನನ್ನ ಮೇಲೆ ನಡೆದ ಸುನ್ನತಿಯ ಕುರಿತು ಹೇಳಬೇಕು. ಮೊದಲನೆಯದಾಗಿ ಅದು ಆಳವಾಗಿ ನನ್ನನು ಕಾಡುತ್ತಿದೆ. ಈಗಲೂ ಆರೋಗ್ಯ ಸಮಸ್ಯೆಯನ್ನು ನಾನು ಎದುರಿಸುತ್ತಿದ್ದೇನೆ. ಎಲ್ಲಕ್ಕಿಂತ ಹೆಚ್ಚಾಗಿ ಲೈಂಗಿಕ ಸುಖದ ಅನುಭವ ನನಗೆ ಸಿಗುವುದು ಸಾಧ್ಯವೇ ಇಲ್ಲ. ನಾನು ಪರಿಪೂರ್ಣಳಲ್ಲ, ಅಂಗವಿಕಲಳೆಂಬ ಭಾವನೆ ನನ್ನನ್ನು ಕಾಡುತ್ತಿದೆ. ಇದನ್ನು ಬದಲಾಯಿಸುವುದು ಸಾಧ್ಯವೇ ಇಲ್ಲವೆಂಬುವುದು ಅತ್ಯಂತ ನಿರಾಶದಾಯಕ ಭಾವನೆಯಾಗಿದೆ. ಇಂತಹ ಒಂದು ಸಂಪ್ರದಾಯ ಇವತ್ತಿಗೂ ಇದೆ ಎಂಬುದನ್ನು ಜನರಿಗೆ ತಿಳಿಯಪಡಿಸುವುದು ಒಂದು ವಿಧದ ಭರವಸೆಯಾಗಿ ನನಗೆ ಕಾಣುತ್ತಿದೆ. ನಾನು ನನಗಾಗಿ ಮಾತ್ರ ಮಾತನಾಡುವುತ್ತಿಲ್ಲ, ನನ್ನ ಹಾಗೆ ಈ ನೋವನ್ನು ಹೊತ್ತುಕೊಂಡಿರುವ ಮತ್ತು ಅದರಿಂದಲೆ ಸಾಯುತ್ತಿರುವ ಅಲ್ಲಿಯ ಲಕ್ಷಗಟ್ಟಲೆ ಹುಡುಗಿಯರಿಗಾಗಿ ಮಾತನಾಡಬೇಕಾಗಿದೆ.

ವಾರಿಸ್ ನೀಡಿದ ಸಂದರ್ಶನ, ಆಮೇಲೆ ಅದಕ್ಕೆ ವ್ಯಕ್ತವಾದ ಪ್ರತಿಕ್ರಿಯೆಗಳು, ಜಾಗತಿಕ ಮಟ್ಟದ್ದಲ್ಲಿ ಸ್ತ್ರೀ ಸುನ್ನತಿಯ ವಿರುದ್ಧ ಹೋರಾಟ ಪ್ರಾರಂಭಗೊಳ್ಳುವುದಕ್ಕೆ ಕಾರಣವಾದವು. ಇದು ಒಬ್ಬಳ ಸಮಸ್ಯೆ ಅಲ್ಲ. ಆಫ್ರಿಕಾದ ಇಪ್ಪತ್ತೆಂಟು ರಾಷ್ಟ್ರಗಳಲ್ಲಿ ಹರಡಿಕೊಂಡಿರುವ ಲಕ್ಷಗಟ್ಟಲೆ ಮಹಿಳೆಯರ ಸಮಸ್ಯೆ ಎಂದು ದೃಢವಾಯಿತು. ಪ್ರತಿದಿನ ಕನಿಷ್ಟ ಆರು ಸಾವಿರ ಹುಡುಗಿಯರು ಈ ಕ್ರೂರ ಪದ್ಧತಿಗೆ ಬಲಿಪಶುವಾಗುತ್ತಿದ್ದಾರೆ. ಅರೆವಳಿಕೆ ಬಳಸದೆ ಕತ್ತಿ, ಬ್ಲೇಡು ಕೆಲವೊಮ್ಮೆ ಕಲ್ಲಾದರೂ ಸರಿ, ಅಂಗ ಛೇದನಕ್ಕೆ ಮೂಲಪದ್ಧತಿ ಮುಖ್ಯವೆನ್ನುವ ಭ್ರಮೆ ನಿವಾರಣೆಯಾಗಬೇಕು. ಇದರ ವಿರುದ್ಧ ಹೋರಾಟಕ್ಕಿಳಿದ ವಿಶ್ವಸಂಸ್ಥೆಯ ಜನಸಂಖ್ಯಾ ನಿಧಿ ಸಂಘದ ಜೊತೆಗೂಡಿ ವಿಶೇಷ ರಾಯಭಾರಿಯಾಗಿ ವಾರಿಸ್ ತನ್ನ ಊರಿನತ್ತ ಪ್ರಯಾಣ ಬೆಳಸಿದ್ದಾಳೆ. ತನ್ನೂರಿನ ಹುಡುಗಿಯರಲ್ಲಿ ಎಚ್ಚರ ಮಾಡಿಸಲಿದ್ದಾಳೆ. ತನ್ನ ಈ ಕೆಲಸ ಅಪಾಯಕಾರಿಯೆಂಬ ತಿಳಿವಳಿಕೆ ಅವಳಿಗೆ ಇದೆ. ಆದರೆ ತನಗೆ ದೊರೆತ ಈ ಅವಕಾಶವನ್ನು ಅವಳು ಬಳಸಲಿದ್ದಾಳೆ. ಬದುಕಿನುದ್ದಕ್ಕೂ ಅವಳು ಮಾಡಿದ್ದು ಇದೇ ತಾನೇ. ಮನೆ ಬಿಟ್ಟು ಓಡಿ ಬರುವಾಗ ಸಿಂಹ ತನ್ನನ್ನು ತಿನ್ನದೇ ಬಿಟ್ಟಿದ್ದು ಈ ಮಹಾತ್ಕಾರ್ಯವನ್ನು ಸಾಧಿಸಲೆಂದು ಇರಬಹುದೇ? ❑

# ನಮ್ಮ ಮಾನಸ ಪತ್ರಿಕೆ



ಪ್ರೀತಿಯ ಮಾನಸ,

ನಾನು ಈ ಹಿಂದೆ ಇಂತಹ ಪತ್ರಿಕೆಯನ್ನು ಯಾವತ್ತೂ ಓದಿರಲಿಲ್ಲ. ಇದೊಂದು ಹೊಸ ಅನುಭವ. ಮಾನಸದ ಗೆಳತಿಯರು ಪತ್ರಿಕೆಯನ್ನು ಕೈಗಿತ್ತು ಓದು ಎಂದಾಗ ಅದು ಇಷ್ಟು ಗಂಭೀರ ವಾದುದು ಎಂದು ನಾನು ಎಣಿಸಿರಲಿಲ್ಲ. ಯುವ ಜನತೆಯ ಕುರಿತಾದ "ಹುಕ್ಕಾ ಪ್ರಕರಣ" ಲೇಖನ ಇಂದಿನ ಶಿಕ್ಷಣ ಮಟ್ಟದ ಕುರಿತಾಗಿ ನಮ್ಮಲ್ಲೇ ಪ್ರಶ್ನೆಗಳನ್ನು ಎಬ್ಬಿಸಿತು. ಮಹಿಳೆಯರ ಕುರಿತಾದ ಸಮಗ್ರ ಚಿಂತನೆಯನ್ನು ನೀಡುವ ಮಾನಸವನ್ನು ಪ್ರತಿಯೊಬ್ಬ ವಿದ್ಯಾರ್ಥಿನಿಯೂ ಓದಬೇಕು. 'ನಮ್ಮ ಮಾನಸ'ವು ಯುವ ಜನತೆ, ಇಂದಿನ ಶಿಕ್ಷಣ ವ್ಯವಸ್ಥೆಯ ಕುರಿತಾಗಿ ಇನ್ನೂ ಗಾಢ ಚಿಂತನೆಯತ್ತ ನಮ್ಮನ್ನು ಕರೆದೊಯ್ಯುವಂತಾಗಲಿ ಎಂದು ಆಶಿಸುತ್ತೇನೆ.

**–ಹೇಮಲತಾ. ಬಿ.**



ಆತ್ಮೀಯ ಮಾನಸ ವೇದಿಕೆ,

'ನಮ್ಮ ಮಾನಸ'ದ ಮುನ್ನಡೆ ಸ್ವಾಗತಾರ್ಹ. ಲೇಖನಗಳು ಚೆನ್ನಾಗಿವೆ. ಆದರೆ ಇನ್ನೂ ಗಂಭೀರವಾಗಿದ್ದರೆ ಚೆನ್ನ ಎಂದು ನನ್ನ ಅಭಿಪ್ರಾಯ. ಪ್ರತೀ ಸಂಚಿಕೆಯಲ್ಲೂ ಮಹಿಳೆಗೆ ಸಂಬಂಧಪಟ್ಟ ಯಾವುದಾದರೂ ಒಂದು ವಿಷಯದ ಕುರಿತಾಗಿ ಲೇಖನಗಳು ಬಂದಾಗ ಓದುಗರಿಗೆ ಉಪಯುಕ್ತವಾಗಬಹುದು.

**–ಸ್ವರ್ಣಾ ಭಟ್**
ಬಾಗಲಕೋಟೆ



ಸನ್ಮಾನ್ಯರಿಗೆ ವಂದನೆಗಳು,

ಇನ್ನೇನು ನನ್ನ ಕೆಲಸ ಮುಗಿಯಿತು, ನನಗಿನ್ನು ಕೆಲಸ ಮಾಡುವ ಶಕ್ತಿ ಇಲ್ಲವೆಂದು ತೆರೆಮರೆಗೆ ಸರಿಯಲು ಪ್ರಯತ್ನಿಸುತ್ತಿದ್ದ ನಮ್ಮ ಮಾನಸವನ್ನು ಮತ್ತೆ ವೇದಿಕೆಗೆ ತಂದು ನಿಲ್ಲಿಸಿದ ಕ್ರಿಯಾಶೀಲರಾದ, ಸಾಮಾಜಿಕ ಬದ್ಧತೆಯುಳ್ಳ ಯುವ ಲೇಖಕಿಯರಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. 'ನಮ್ಮ ಮಾನಸ' ಹಿಂದಿಗಿಂತಲೂ ಸೊಗಸಾಗಿ ಮೈತುಂಬಿಕೊಂಡು ಕಾಣಿಸಿಕೊಳ್ಳುತ್ತದೆ ಎಂಬ ಭರವಸೆ ನಮಗಿದೆ.

**–ಬಿ.ಎಂ. ರೋಹಿಣಿ**
ಕುಟುಪು, ಮಂಗಳೂರು

ಆತ್ಮೀಯ ಮಾನಸ ವೇದಿಕೆಯಲ್ಲಿ ಒಂದು ಅನಿಸಿಕೆ,

ಮಾನಸ ನಡೆದು ಬಂದ ಹಾದಿ ಫೆಬ್ರವರಿ 2012 ನೋಡಿ ಕಣ್ಣು ಹಿಗ್ಗಲಿಸಿ ಓದುತ್ತಾ ನನ್ನಲ್ಲಿ ಸಂಗ್ರಹವಿರುವ ಮಾನವಿ, ಮಾನುಷಿ, ಮಾನಸ ಪ್ರತಿಗಳು ಗಂಟುಮೂಟೆಯಲ್ಲಿ ಮಾನಸದ ಕಷ್ಟದ ಕಥೆಯನ್ನು ತಡಬಡಿಸುತ್ತವೆ.

ಅಂತರಾಷ್ಟ್ರಿಯ ಮಹಿಳಾ ದಿನ ಹಾಗೂ ಕಾರ್ಮಿಕರ ದಿನಾಚರಣೆಯ ಹಿನ್ನೆಲೆಯಲ್ಲಿ ನೋಡಿದಾಗ ಮಹಿಳೆ ತನ್ನ ಪರಿಧಿಯಲ್ಲೇ ಸೆಣಸುವುದನ್ನು ಕಾಣಬಹುದು. ಇತರ ಎಲ್ಲಾ ರಂಗಗಳಂತೆ, ಹಳ್ಳಿಗಳಲ್ಲಿ ಕೂಡಾ ಆಧುನೀಕರಣ ಮಹಿಳೆಯ ಮೇಲೆ ಪರಿಣಾಮ ಬೀರುತ್ತಿದೆ. ಹಳ್ಳಿ ಹಳ್ಳಿಗೂ ಒಂದಷ್ಟು ಆಸರೆಯಾಗಿದ್ದ ಎಲ್ಲಾ ಗುಡಿ ಕೈಗಾರಿಕೆ, ಮಡಕೆ, ಚಾಪೆ, ಹಗ್ಗ, ಗಾಣ, ನೇಯ್ಗೆ, ಹಾಲು, ಹೈನು, ಬೇಸಾಯ, ಎಲ್ಲವೂ ನವನವೀಕರಣದ ದೆಸೆಯಿಂದ ಅವಳ ಆರ್ಥಿಕ ಪರಿಸ್ಥಿತಿಯ ಮೇಲೆ ಪರಿಣಾಮ ಬೀರಿ ಅವಳ ಸಾಸುವೆ ಡಬ್ಬದ ಮುಡಿಗಾಸಿಗೂ ಸಾಲದಂತಾಗಿದೆ. ನೀರಿನ ದಟ್ಟ ಅಭಾವ, ಬತ್ತಿದ ಅಂತರ್ಜಲ, ಒಣಗಿದ ಕೆರೆ, ಕುಂಟೆ, ಕಾಲುವೆ, ಒಟ್ಟು ಎಲ್ಲೆಲ್ಲೂ ಮರುಭೂಮಿಯ ಬಿರು ಬೆಂಕಿಯಿಂದ ಸೊಪ್ಪು ಸದೆ, ಹಿತ್ತಲಿನ ಬೇಳೆ ಕಾಳು, ಕನರು, ತರಕಾರಿಯ ಅಲ್ಪ ಆದಾಯ ಕೂಡಾ ಗಗನ ಕುಸುಮವಾಗುತ್ತಿದೆ. ಅಲ್ಪ ಸ್ವಲ್ಪ ಮಳೆ ಸುರಿದು ಅಷ್ಟಿಷ್ಟು ಬೇಸಾಯದ ಆರಾಮ ಬಿಟ್ಟರೆ ಅವಳ ಕುಟುಂಬ ನಿರ್ವಹಣೆ, ಮಕ್ಕಳ ಪೋಷಣೆ, ಸಂಸಾರದ ಘಟ್ಟ ಹತ್ತಿ ಇಳಿಯುವಿಕೆ ಅತ್ಯಂತ ದುರ್ಭರವಾಗುತ್ತಿರುವಾಗ ಅವಳ ಪರಿಧಿ ಮೀರಿದ ಬದಲಾವಣೆ ಜಗತ್ತನ್ನೇ ಆವಾಹಿಸುವುದು ಎಷ್ಟು ಸುಲಭ?

ಈ ನಿಟ್ಟಿನಲ್ಲಿ ಮಾನಸದ ಈ ಬೆಳವಣಿಗೆ ಗಮನಾರ್ಹ. ಎಲ್ಲರನ್ನೂ ತಲುಪುವಂತಹ ಬರಹಗಳನ್ನು ಅಳವಡಿಸಿ, ಸಣ್ಣದಾಗಿ, ಸರಳವಾಗಿ, ಆಡುಮಾತುಗಳ ಮೂಲಕ ಓದುಗರನ್ನು ಸೇರಲಿ ಎಂದು ಆಶಿಸುತ್ತೇನೆ.

ಇಂತಿ ತಮ್ಮ ವಿಶ್ವಾಸಿ,
**–ಉತ್ತನೂರು ರಾಜಮ್ಮ ವಿ.**
ಚಿಂತಾಮಣಿ

## ಚಂದಾದಾರರಲ್ಲಿ ಮನವಿ

### ನವೀಕರಣ

*ಈಗಾಗಲೇ ಚಂದಾ ಅವಧಿ ಮುಗಿದಿರುವ ಚಂದಾದಾರರು ಕೂಡಲೇ ನವೀಕರಿಸಿ. ಚಂದಾ ಅವಧಿ ಮುಗಿಯುವ 2-3 ತಿಂಗಳ ಮೊದಲೇ ಈ ಕುರಿತು ಚಂದಾದಾರರಿಗೆ ಮಾಹಿತಿ ನೀಡಲಾಗುವುದು. ದಯವಿಟ್ಟು ಕೂಡಲೇ ಚಂದಾ ನವೀಕರಿಸಬೇಕೆಂದು ವಿನಂತಿಸುತ್ತೇವೆ.*

***–ಸಂಪಾದಕ ಮಂಡಳಿ***

**ನಿಮ್ಮ ಸ್ನೇಹಿತರನ್ನೂ ಚಂದಾದಾರರನ್ನಾಗಿಸಿ**

# ಅಲ್ಪಸಂಖ್ಯಾತರ ಅಭಿವೃದ್ಧಿಯಲ್ಲಿ ಸರ್ಕಾರದ ವಿಶಿಷ್ಟ ಸಾಧನೆ

ಕರ್ನಾಟಕ ಸರ್ಕಾರವು ರಾಜ್ಯದಲ್ಲಿ ಅಲ್ಪಸಂಖ್ಯಾತರ ಅಭಿವೃದ್ಧಿಗೆ ವಿಶೇಷ ಒತ್ತು ನೀಡಿದೆ. ಬೇರೆಬೇರೆ ಅಲ್ಪಸಂಖ್ಯಾತ ಸಮುದಾಯದ ಕಲ್ಯಾಣಕ್ಕಾಗಿ 2011–12ನೇ ಸಾಲಿನ ದಾಖಲೆ ಮೊತ್ತದ 326 ಕೋಟಿ ಅನುದಾನವನ್ನು ಬಿಡುಗಡೆ ಮಾಡಿ ಅಭಿವೃದ್ಧಿ ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸಿದೆ.

**ಅಲ್ಪಸಂಖ್ಯಾತರ ನಿರ್ದೇಶನಾಲಯ**

- ಹೊಸದಾಗಿ ವೃಂದ ಮತ್ತು ನಿಯಮಾವಳಿ ರೂಪಿಸಿ 1726 ಹೊಸ ಹುದ್ದೆಗಳ ನೇಮಕಾತಿಗೆ ಕ್ರಮ.
- ಹಿಂದುಳಿದ ವರ್ಗಗಳ ಇಲಾಖೆಯ ಅಧಿಕಾರ ವ್ಯಾಪ್ತಿಯಲ್ಲಿದ್ದ ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆಯನ್ನು ಅಧಿಕೃತವಾಗಿ ಬೇರ್ಪಡಿಸಿ 12 ಜಿಲ್ಲೆಗಳಲ್ಲಿ **"ಜಿಲ್ಲಾ ಅಧಿಕಾರಿ, ಅಲ್ಪಸಂಖ್ಯಾತರ ಕಲ್ಯಾಣ ಇಲಾಖೆ"** ಎಂಬ ಹೊಸ ಹುದ್ದೆಯನ್ನು ಸೃಜಿಸಲಾಗಿದೆ. ಉಳಿದ 18 ಜಿಲ್ಲೆಗಳಲ್ಲಿಯೂ ಸಹ ಹೊಸ ಹುದ್ದೆಗಳನ್ನು ಸೃಜಿಸಲು ಕ್ರಮ ವಹಿಸಲಾಗಿದೆ.

**ವಿದ್ಯಾರ್ಥಿ ವೇತನ**

- ಸುಮಾರು 5 ಲಕ್ಷ ವಿದ್ಯಾರ್ಥಿಗಳಿಗೆ ರೂ. 178 ಕೋಟಿಗಳಷ್ಟು ವಿದ್ಯಾರ್ಥಿ ವೇತನವನ್ನು ಕೇಂದ್ರ ಸರ್ಕಾರದ ಸಹಯೋಗದೊಂದಿಗೆ ವಿತರಿಸಿದೆ.

**ಸಮುದಾಯ ಭವರ / ಶಾದಿಮಹಲ್ ನಿರ್ಮಾಣ**

- 150 ಸಂಸ್ಥೆಗಳಿಗೆ ಶಾದಿಮಹಲ್/ಸಮುದಾಯ ಭವನ ನಿರ್ಮಿಸಲು ರೂ. 36.00 ಕೋಟಿ ಅನುದಾನ ಮಂಜೂರು ಮಾಡಲಾಗಿರುತ್ತದೆ.

**ಮೊರಾರ್ಜಿ ದೇಸಾಯಿ ವಸತಿಶಾಲೆ**

- ನಿರ್ಮಾಣಗೊಳ್ಳುತ್ತಿರುವ 22 ನೂತನ ವಸತಿ ಶಾಲೆಗಳಿಗೆ ನಿರ್ಮಾಣ ಮತ್ತು ನಿರ್ವಹಣೆಗಾಗಿ ರೂ. 52.00 ಕೋಟಿಗಳಷ್ಟು ಅನುದಾನ ಒದಗಿಸಲಾಗಿದೆ.

**ಕೌಶಲ್ಯ ಅಭಿವೃದ್ಧಿ ಯೋಜನೆ**

- 18,364 ಫಲಾನುಭವಿಗಳಿಗೆ ರೂ. 15.40 ಕೋಟಿ ಮೊತ್ತದ ಪ್ರಯೋಜನ ಪಡೆದಿರುವರು.

**ನೂತನ ಅಲ್ಪಸಂಖ್ಯಾಂತರ ವಸತಿ ನಿಲಯಗಳ ನಿರ್ವಹಣೆ**

- ರೂ. 13.17 ಕೋಟಿ ವೆಚ್ಚದಲ್ಲಿ 8,399 ವಿದ್ಯಾರ್ಥಿಗಳಿಗೆ ವಸತಿ ಸೌಲಭ್ಯ ನೀಡಲಾಗಿದೆ.

**ಕಲಿಕಾ ಸಾಮಾಗ್ರಿಗಳು**

- ಅಲ್ಪಸಂಖ್ಯಾಂತರ ಶಾಲೆಗಳ ಗುಣಮಟ್ಟ ಹೆಚ್ಚಿಸಲು ರೂ. 371 ಲಕ್ಷ ವೆಚ್ಚದಲ್ಲಿ 3,675 ಶಾಲೆಗಳಿಗೆ ಕಲಿಕಾ ಸಾಮಾಗ್ರಿಗಳನ್ನು ಒದಗಿಸಲಾಗಿದೆ.

**ಕಾನೂನು ಪದವೀಧರರಿಗೆ ಶಿಷ್ಯವೇತನ**

- ಹೊಸದಾಗಿ ನೋಂದಾಯಿಸಿದ 617 ಕಾನೂನು ಪದವೀಧರರಿಗೆ ಧನಸಹಾಯವಾಗಿ ರೂ. 91.30 ಲಕ್ಷ ವಿತರಿಸಿದೆ.
- ಐ.ಎ.ಎಸ್. / ಕೆ.ಎ.ಎಸ್. ಸ್ಪರ್ಧಾತ್ಮಕ ಪರೀಕ್ಷೆ ತರಬೇತಿ ಮತ್ತು ವಿದೇಶಗಳಲ್ಲಿ ಉನ್ನತ ವ್ಯಾಸಂಗಕ್ಕೆ ಕಳುಹಿಸಲು ಸುಮಾರು ರೂ. 2.00 ಕೋಟಿ ಧನಸಹಾಯ ಮೀಸಲಿರಿಸಲಾಗಿದೆ.
- ಕ್ರೈಸ್ತ ಸಮುದಾಯದ ಅಭಿವೃದ್ಧಿಗೆ ಪ್ರಪ್ರಥಮಬಾರಿ ರೂ. 50.00 ಕೋಟಿ ಮೊತ್ತದ ಅನುದಾನ ಮೀಸಲಿಟ್ಟಿದೆ.


ಕರ್ನಾಟಕ ವಾರ್ತೆ

Registered with Registrar of Newspapers of India under No. KARKAN/2007/22289
'NAMMA MANASA', REGD.No.: MAG(3) NPP/399(A)/2006-07 **Reg.KA/BGS/2074/2010-12**

# ಮಗ್ಗುಲು ನಾತದ ಮನೆ

ಅವಳು ತೆರಳಿದ ಮನೆ
ಬೀಗ ಏನೂ ಹಾಕಿದ್ದಲ್ಲ
ಇದ್ದಾರೆ ಮನೆಯಲ್ಲಿ
ಮನುಷ್ಯರಂತೆ ಕಾಣಿಸುವವರು
ಜೊತೆಗೆ ಬೆಕ್ಕು ನಾಯಿ ದನ
ಹಂದಿಯೇನೂ ಇರಲಿಲ್ಲ
ಕನಸು ಕಟ್ಟಿದ ಮನೆ
ಕನಸೇ ಆದ ಮನೆ
ಬಿಟ್ಟರೂ ಬಿಡದಂತೆ ಮಾಯೆ
ಹೋಗುತ್ತಾಳವಳು ಆಗಾಗ
ಕದತಟ್ಟಿ
ಕದ ರೆಕ್ಕೆ ತೆರೆದೀತು
ಎಂಬ ಧಕ್ಕೆ ಕಟ್ಟಿ
ತೆರೆದುಕೊಳ್ಳುತ್ತದೆ
ಮಗ್ಗುಲು ನಾತ
ಹೊಸ್ತಿಲಲ್ಲಿ, ನಡು ಮನೆಯಲ್ಲಿ
ಕೋಣೆಯಲ್ಲಿ ಕೊನೆಗೆ
ಹಿಂದೆ ಹಿತ್ತಲ ಬಾಗಿಲಲ್ಲೂ
ಕೊಳೆತ ಹೆಣದ ಸಪಾಯಿಗೂ
ರಟ್ಟೆಯಲಿ ಕೆಚ್ಚಿಲ್ಲ
ಹೆಣ ಬಿದ್ದಿದ್ದೂ ಅರಿವಿರದ ಜಾಗದಲಿ
ಕಣ್ಣೀರಿಗೂ.

■ ಸಬಿತಾ ಬನ್ನಾಡಿ



Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018